CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಏಪ್ರಿಲ್ ೧, ೨೦೦೪ (ಚೈತ್ರ ೧೨, ಶಕ ವರ್ಷ ೧೯೨೬) | ಸಂಚಿಕೆ ೧೪ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಬೀದರ್ ತಾಲ್ಲೂಕು**

**ಅಧಿಸೂಚನೆ ಸಂಖ್ಯೆ:ಜಿಸಕಅಬೀ:ಸಿಬ್ಬಂದಿ:ಸಿಆರ್:2003-04:84 ದಿನಾಂಕ: 17ನೇ ಫೆಬ್ರವರಿ 2004**

**ವಿಷಯ :** ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000 ಹಾಗೂ 2002ರ ಅನುಷ್ಠಾನದ ಬಗ್ಗೆ.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಸಂ:ಸಿಆಸುಇ-56: ಯೋಮಸ-02(1) ದಿನಾಂಕ: 18.7.2002.

ಕರ್ನಾಟಕ ಮಾಹಿತಿ ಪಡೆಯುವ ಹಕ್ಕು ಅಧಿನಿಯಮ 2000 ಮತ್ತು ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ನಿಯಮಗಳು 2002 ಈಗಾಗಲೇ ಜಾರಿಗೆ ಬಂದಿದ್ದು ಸದರಿ ಅಧಿನಿಯಮದ ರೀತ್ಯಾ ಎಲ್ಲಾ ಸಾರ್ವಜನಿಕ ಪ್ರಾಧಿಕಾರಿಗಳು (ಕಛೇರಿಗಳು) ಅಧಿನಿಯಮದ ಸೆಕ್ಷನ್ 2 (ಎ) ಅಡಿಯಲ್ಲಿ ವ್ಯಾಖ್ಯಾನಿಸಿರುವಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಗಳನ್ನು ನೇಮಿಸಬೇಕಾಗಿರುತ್ತದೆ. ಅದರಂತೆ ತಾಲ್ಲೂಕು ಮಟ್ಟದ ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ಸಕ್ಷಮ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳಾಗಿ ಈ ಕೆಳಗಿನಂತೆ ನೇಮಿಸಲಾಗಿದೆ.

| | ಸಕ್ಷಮ ಪ್ರಾಧಿಕಾರಿ | ಅಪೀಲು ಪ್ರಾಧಿಕಾರ |
|---|---|---|
| ತಾಲ್ಲೂಕು ಮಟ್ಟದಲ್ಲಿ | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ | ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು |

ಸರ್ಕಾರದ ಅಧಿನಿಯಮದ ಸೆಕ್ಷನ್ 3(ಬಿ) ಅಡಿಯಲ್ಲಿ ನಿಗದಿಪಡಿಸಿದಂತೆ ಈ ಕೆಳಗೆ ತಿಳಿಸಿರುವ ಶೀರ್ಷಿಕೆಗಳಲ್ಲಿ ತಿಳಿಸಿರುವ ವಿವರಗಳನ್ನು ಸಾರ್ವಜನಿಕ ಪ್ರಕಟಣೆಗಾಗಿ ಈ ಕೆಳಗಿನಂತೆ ತಿಳಿಯಪಡಿಸಿದೆ.

**1. ಇಲಾಖೆಯ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳ ವಿವರಗಳು.**

ತಾಲ್ಲೂಕು ಹಂತದಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳ ಕಛೇರಿಯ ತಾಲ್ಲೂಕು ಪಂಚಾಯತ್ ವ್ಯಾಪ್ತಿಯಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಅಲ್ಲಿ ತಾಲ್ಲೂಕು ಸಮಾಜ ಕಲ್ಯಾಣಾಧಿಕಾರಿಗಳು ಕಛೇರಿ ಮುಖ್ಯಸ್ಥರಾಗಿರುತ್ತಾರೆ. ಈ ಕೆಳಗಿನಂತೆ ಸಿಬ್ಬಂದಿ ವ್ಯವಸ್ಥೆ ಇರುತ್ತದೆ.

**ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ಕಛೇರಿ, ಬೀದರ್ ಸಿಬ್ಬಂದಿ ವಿವರಗಳು**

| | | | |
|---|---|---|---|
| 1. | ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿ | : | 1 ಹುದ್ದೆ |
| 2. | ಕಛೇರಿ ಅಧೀಕ್ಷಕರು | : | 1 ಹುದ್ದೆ |
| 3. | ಪ್ರಥಮ ದರ್ಜೆ ಸಹಾಯಕರು | : | 1 ಹುದ್ದೆ (ಪ್ರಸ್ತುತ ಖಾಲಿ ಹುದ್ದೆ) |
| 4. | ದ್ವಿತೀಯ ದರ್ಜೆ ಸಹಾಯಕರು | : | 1 ಹುದ್ದೆ |
| 5. | ಬೆರಳಚ್ಚುಗಾರ | : | 1 ಹುದ್ದೆ |
| 6. | ಸಿಪಾಯಿ | : | 1 ಹುದ್ದೆ |
| | | | 6 ಹುದ್ದೆ |

**1. ಮೆಟ್ರಿಕ್ ನಂತರದ ಬಾಲಕರ ವಸತಿ ನಿಲಯ, ಮೈಲೂರು-1**

1. ಮೇಲ್ವಿಚಾರಕರು : 1 ಹುದ್ದೆ
2. ಅಡಿಗೆಯವರು : 3 ಹುದ್ದೆ
3. ಅಡಿಗೆ ಸಹಾಯಕರು : 2 ಹುದ್ದೆ.

6 ಹುದ್ದೆ

**2. ಮೆಟ್ರಿಕ್ ನಂತರದ ಬಾಲಕರ ವಸತಿ ನಿಲಯ ಮೈಲೂರು-2 (ಚಿಟ್ಟಾವಾಡಿ)**

1. ಮೇಲ್ವಿಚಾರಕರು : 1 ಹುದ್ದೆ
2. ಅಡಿಗೆಯವರು : 3 ಹುದ್ದೆ
3. ಅಡಿಗೆ ಸಹಾಯಕರು : 2 ಹುದ್ದೆ.

6 ಹುದ್ದೆ

**3. ಮೆಟ್ರಿಕ್ ನಂತರದ ಬಾಲಕರ ವಸತಿ ನಿಲಯ ಪ್ರತಾಪ ನಗರ ನೌಬಾದ:**

1. ಮೇಲ್ವಿಚಾರಕರು : 1 ಹುದ್ದೆ
2. ಅಡಿಗೆಯವರು : 3 ಹುದ್ದೆ
3. ಅಡಿಗೆ ಸಹಾಯಕರು : 2 ಹುದ್ದೆ.

6 ಹುದ್ದೆ

**4. ಮೆಟ್ರಿಕ್ ನಂತರದ ಬಾಲಕರ ವಸತಿ ನಿಲಯ (ಡಿಗ್ರಿ) ನೌಬಾದ**

1. ಮೇಲ್ವಿಚಾರಕರು : 1 ಹುದ್ದೆ (ಪ್ರಸ್ತುತ ಖಾಲಿ ಹುದ್ದೆ)
2. ಅಡಿಗೆಯವರು : 2 ಹುದ್ದೆ (ನಿಧನರಾದ ಪ್ರಯುಕ್ತ 1 ಹುದ್ದೆ ಖಾಲಿ ಇದೆ)
3. ಅಡಿಗೆ ಸಹಾಯಕರು : 1 ಹುದ್ದೆ.

4 ಹುದ್ದೆ

**5. ಮೆಟ್ರಿಕ್ ನಂತರದ ಬಾಲಕಿಯರ ವಸತಿ ನಿಲಯ ಬೀದರ**

1. ಮೇಲ್ವಿಚಾರಕರು : 1 ಹುದ್ದೆ (ಪ್ರಸ್ತುತ ಖಾಲಿ ಹುದ್ದೆ)
2. ಅಡಿಗೆಯವರು : 2 ಹುದ್ದೆ
3. ಅಡಿಗೆ ಸಹಾಯಕರು : 1 ಹುದ್ದೆ.
4. ರಾತ್ರಿ ಕಾವಲುಗಾರಳು : 1 ಹುದ್ದೆ (ಪ್ರಸ್ತುತ ಖಾಲಿ ಹುದ್ದೆ)

5 ಹುದ್ದೆ

**6. ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯ(ಜನವಾಡಾ ರಸ್ತೆ) ಬೀದರ**

1. ಮೇಲ್ವಿಚಾರಕರು : 1 ಹುದ್ದೆ
2. ಅಡಿಗೆಯವರು : 5 ಹುದ್ದೆ
3. ಅಡಿಗೆ ಸಹಾಯಕರು : 2 ಹುದ್ದೆ.

8 ಹುದ್ದೆ

**7. ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ (ಸಿದ್ಧಿತಾಲೀಮ್) ಬೀದರ**

1. ಮೇಲ್ವಿಚಾರಕರು : 1 ಹುದ್ದೆ
2. ಅಡಿಗೆಯವರು : 5 ಹುದ್ದೆ
3. ಅಡಿಗೆ ಸಹಾಯಕರು : 2 ಹುದ್ದೆ.

8 ಹುದ್ದೆ

**8. ಮೆಟ್ರಿಕ್ ಪೂರ್ವ ಬಾಲಕಿಯರ ವಸತಿ ನಿಲಯ ಬೀದರ**

1. ಮೇಲ್ವಿಚಾರಕರು : 1 ಹುದ್ದೆ
2. ಅಡಿಗೆಯವರು : 3 (ಹುದ್ದೆ ನಿವೃತ್ತರಾದ ಪ್ರಯುಕ್ತ 1 ಹುದ್ದೆ ಖಾಲಿ ಇದೆ).
3. ಅಡಿಗೆ ಸಹಾಯಕರು : 2 ಹುದ್ದೆ.
4. ರಾತ್ರಿ ಕಾವಲುಗಾರ : 1 ಹುದ್ದೆ

7 ಹುದ್ದೆಗಳು

**9. ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ ಮಾಳೆಗಾಂವ**

1. ಮೇಲ್ವಿಚಾರಕರು : 1 ಹುದ್ದೆ
2. ಅಡಿಗೆಯವರು : 1 ಹುದ್ದೆ
3. ಅಡಿಗೆ ಸಹಾಯಕರು : 1 ಹುದ್ದೆ

3 ಹುದ್ದೆ

**10. ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ ಚಿದ್ರಿ:**

| | | |
|---|---|---|
| 1. | ಮೇಲ್ವಿಚಾರಕರು | : 1 ಹುದ್ದೆ |
| 2. | ಅಡಿಗೆಯವರು | : 2 ಹುದ್ದೆ |
| 3. | ಅಡಿಗೆ ಸಹಾಯಕರು | : 1 ಹುದ್ದೆ |
| | | 4 ಹುದ್ದೆ |

**11. ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ ಜನವಾಡಾ:**

| | | |
|---|---|---|
| 1. | ಮೇಲ್ವಿಚಾರಕರು | : 1 ಹುದ್ದೆ |
| 2. | ಅಡಿಗೆಯವರು | : 2 ಹುದ್ದೆ |
| 3. | ಅಡಿಗೆ ಸಹಾಯಕರು | : 1 ಹುದ್ದೆ |
| | | 4 ಹುದ್ದೆ |

**12. ಮೆಟ್ರಿಕ್ ಪೂರ್ವ ಬಾಲಕರ ವಸತಿ ನಿಲಯ ಪ್ರತಾಪ ನಗರ ನೌಬಾದ:**

| | | |
|---|---|---|
| 1. | ಮೇಲ್ವಿಚಾರಕರು | : 1 ಹುದ್ದೆ |
| 2. | ಅಡಿಗೆಯವರು | : 2 ಹುದ್ದೆ |
| 3. | ಅಡಿಗೆ ಸಹಾಯಕರು | : 1 ಹುದ್ದೆ |
| | | 4 ಹುದ್ದೆ |

**13. ಆಶ್ರಮ ಶಾಲೆ ಸಂಗೋಳಗಿ ತಾಂಡಾ:**

| | | |
|---|---|---|
| 1. | ಶಿಕ್ಷಕರು | : 2 ಹುದ್ದೆ (ನಿವೃತ್ತರಾದ ಪ್ರಯುಕ್ತ 1 ಹುದ್ದೆ ಖಾಲಿ ಇದೆ). |
| 2. | ಅಡಿಗೆಯವರು | : 2 ಹುದ್ದೆ |
| 3. | ಅಡಿಗೆ ಸಹಾಯಕರು | : 1 ಹುದ್ದೆ |
| | | 5 ಹುದ್ದೆ |

**14. ಹೊಲಿಗೆ ತರಬೇತಿ ಕೇಂದ್ರ ಬೀದರ:ಚಿದ್ರಿ:**

| | | |
|---|---|---|
| 1. | ಬೋಧಕರು | : 2 ಹುದ್ದೆ (ಪ್ರಸ್ತುತ ಖಾಲಿ ಇರುತ್ತವೆ ದಿನಗೂಲಿ ಮೇಲೆ ಕಾರ್ಯನಿರ್ವಹಿಸುತ್ತಿರುವವರು). |

**ಸಮಾಜ ಕಲ್ಯಾಣ ಇಲಾಖೆಗೆ ಸಂಬಂಧಿಸಿದಂತೆ ತಾಲ್ಲೂಕು ಮಟ್ಟದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಸರ್ವತೋಮುಖ ಅಭಿವೃದ್ಧಿಗಾಗಿ ಈ ಕೆಳಕಂಡ ಹಲವಾರು ಶೈಕ್ಷಣಿಕ ಮತ್ತು ಆರ್ಥಿಕ ನೆರವಿನ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.**

1. ವಸತಿ ಶಾಲೆಗಳ ನಿರ್ವಹಣೆ.
2. ಅನುದಾನಿತ ವಿದ್ಯಾರ್ಥಿನಿಲಯಗಳ ತಪಾಸಣೆ
3. ಕಾಲೇಜು ವಿದ್ಯಾರ್ಥಿ ನಿಲಯಗಳ ನಿರ್ವಹಣೆ
4. ಮೊರಾರ್ಜಿದೇಸಾಯಿ ವಸತಿ ಶಾಲೆಗಳ ತಪಾಸಣೆ ಮತ್ತು ನಿರ್ವಹಣೆ
5. ಭಾರತ ಸರ್ಕಾರದ ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನ ನೀಡುವಿಕೆ.
6. ಪುಸ್ತಕ ಭಂಡಾರ
7. ಅಧ್ಯಯನ ಪ್ರವಾಸಕ್ಕೆ ನೆರವು.
8. 1 ರಿಂದ 4ನೇ ತರಗತಿವರೆಗೆ ವಿದ್ಯಾರ್ಥಿ ವೇತನ.
9. ಮಹಿಳೆಯರಿಗೆ ಹೊಲಿಗೆ ತರಬೇತಿ ಕೇಂದ್ರ.
10. ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗಗಳ ಜನರಿಗಾಗಿ ವಿದ್ಯಾರ್ಥಿ ನಿಲಯಗಳ ನಿರ್ಮಾಣ.
11. ಕಾಲೇಜು ವಿದ್ಯಾರ್ಥಿಗಳಿಗೆ ಸರ್ಕಾರಿ ವಸತಿ ನಿಲಯಗಳ ಪ್ರಾರಂಭ
12. ಕಾಲೇಜು ವಿದ್ಯಾರ್ಥಿಗಳಿಗೆ ಪುರಸ್ಕಾರ ಬಹುಮಾನ.
13. ಸ್ವಯಂ ಉದ್ಯೋಗಕ್ಕೆ ಶಿಷ್ಯವೇತನ.
14. ಕಾನೂನು ಪದವೀಧರರಿಗೆ ಶಿಷ್ಯವೇತನ.
15. ಅಂತರ್ಜಾತಿ ವಿವಾಹವಾದ ದಂಪತಿಗಳಿಗೆ ಸಹಾಯಧನ ಒದಗಿಸುವುದು.
16. ಜಾತಿ ಪರಿಶೀಲನೆ ನಡೆಸಿ ಸಿಂಧುತ್ವ ಪ್ರಮಾಣ ಪತ್ರ ನೀಡಿಕೆಯಲ್ಲಿ ವರದಿ ಸಲ್ಲಿಸುವುದು.
17. ವಿಶೇಷ ಘಟಕ ಯೋಜನೆಗೆ ವಿಶೇಷ ಕೇಂದ್ರೀಯ ನೆರವು.
18. ಅಂಬೇಡ್ಕರ್ ವಸತಿ ಯೋಜನೆ.
19. ಆಶ್ರಯ ವಸತಿ ಯೋಜನೆ.
20. ಪರಿಶಿಷ್ಟ ಜಾತಿ: ಪರಿಶಿಷ್ಟ ವರ್ಗದ ಜನರು ದೌರ್ಜನ್ಯಕ್ಕೆ ಒಳಪಟ್ಟಲ್ಲಿ ಪರಿಹಾರ ಮಂಜೂರಾತಿ.
21. ಅಸ್ಪೃಶ್ಯತಾ ನಿವಾರಣೆ.

**ಅಧಿಕಾರಿಗಳ ಕರ್ತವ್ಯಗಳು:**

1. ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಮತ್ತು ಕಾರ್ಯನಿರ್ವಾಹಕ ಅಧಿಕಾರಿಗಳು ತಾಲ್ಲೂಕು ಪಂಚಾಯಿತಿ ಅಧೀನದಲ್ಲಿ ಕಾರ್ಯನಿರ್ವಹಿಸುವುದು (ಇಲಾಖೆಗೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ನಿರ್ವಹಿಸುವುದು).
2. ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗ ಜನಾಂಗದವರ ಏಳಿಗೆಗಾಗಿ ವಿವಿಧ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ವಿವರವಾದ ಯೋಜನೆಗಳನ್ನು ತಯಾರಿಸಲು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳೊಂದಿಗೆ ಸಹಕರಿಸಿ ವರದಿ ಸಲ್ಲಿಸುವುದು.
3. ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು ತಿಂಗಳಲ್ಲಿ 15 ದಿವಸಗಳನ್ನು ವಸತಿ ನಿಲಯಗಳ ತಪಾಸಣೆ ನಡೆಸುವುದು ನ್ಯೂನತೆಗಳು ಇದ್ದಲ್ಲಿ ಸರಿಪಡಿಸುವುದು ನಿಲಯದ ವಿದ್ಯಾರ್ಥಿಗಳ ಕುಂದು ಕೊರತೆಗಳನ್ನು ನಿವಾರಿಸುವುದು.

**ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಯವರ ಇತರೆ ಕೆಲಸಗಳು:**

1. ದೌರ್ಜನ್ಯ ಪ್ರಕರಣಗಳಿಗೆ ಸಂಬಂಧಿಸಿದಂತೆ ಪೊಲೀಸ್ ಇಲಾಖೆಗಳಲ್ಲಿ ಕೇಸು ದಾಖಲಿಸಿದ ವಿವರಗಳನ್ನು ಪಡೆದು ನಿಯಮಾನುಸಾರ ಪರಿಹಾರ ಧನ ಸಹಾಯಕ್ಕಾಗಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ವರದಿ ಸಲ್ಲಿಸುವುದು.
2. ಸರ್ಕಾರದಿಂದ ಹಾಗೂ ಮೇಲಾಧಿಕಾರಿಗಳಿಂದ ಬರುವ ಪತ್ರಗಳಿಗೆ ಒಂದು ವಾರದಲ್ಲಿ ಉತ್ತರವನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಮುಖಾಂತರ ಸಲ್ಲಿಸುವುದು.
3. ವಿದ್ಯಾರ್ಥಿ ನಿಲಯ ಮೇಲ್ವಿಚಾರಕರ ಮತ್ತು ಸಿಬ್ಬಂದಿಯ ಕೆಲಸದ ಮೇಲ್ವಿಚಾರಣೆ ಮಾಡುವುದು. ಮತ್ತು ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ರವರಿಗೆ ಒದಗಿಸುವುದು.
4. ತಾಲ್ಲೂಕು ಮಟ್ಟದ್ದಲ್ಲಿ ವಿದ್ಯಾರ್ಥಿ ನಿಲಯಗಳಲ್ಲಿ ಖಾಲಿ ಇರುವ ನಿಲಯಾರ್ಥಿಗಳ ಸ್ಥಳಗಳಿಗೆ ಭರ್ತಿ ಮಾಡಲು ಪತ್ರಿಕಾ ಪ್ರಕಟಣೆ ಮಾಡಿ ಬಂದಂತ ಅರ್ಜಿಗಳನ್ನು ಪರಿಶೀಲಿಸಿ ಅರ್ಹ ವಿದ್ಯಾರ್ಥಿಗಳಿಗೆ ಪ್ರವೇಶ ತೆಗೆದುಕೊಳ್ಳಲು ತಾಲ್ಲೂಕು ಪಂಚಾಯತ್ ಮುಖಾಂತರ ಆಯ್ಕೆ ಪ್ರಕ್ರಿಯೆ ನಡೆಸಲಾಗುವುದು.
5. ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗಗಳ ಅಭಿವೃದ್ಧಿ ಕಾರ್ಯಕ್ರಮಗಳು ತ್ವರಿತವಾಗಿ ಅನುಷ್ಠಾನಗೊಳಿಸಲು ತಾಲ್ಲೂಕು ಪಂಚಾಯತ್ ಪುರಸಭೆ ನಗರ ಸಭೆ ಇನ್ನಿತರ ಇಲಾಖೆಗಳಿಗೆ ಭೇಟಿ ನೀಡುವುದು. ಹಾಗೂ ಅನುಷ್ಠಾನಗೊಳಿಸಿದ ಬಗ್ಗೆ ಮಾಹಿತಿಯನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳಿಗೆ ಸಲ್ಲಿಸುವುದು.
6. ತಾಲ್ಲೂಕು ಮಟ್ಟದಲ್ಲಿ ಬಿಡುಗಡೆಯಾದ ಅನುದಾನವನ್ನು ಪೂರ್ತಿಯಾಗಿ ಖರ್ಚು ಮಾಡಿ ಪ್ರಗತಿ ವರದಿಯನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ರವರಿಗೆ ಸಲ್ಲಿಸುವುದು.
7. ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗದವರ ಏಳಿಗೆಗಾಗಿ ಸಂಬಂಧಿಸಿದ ಸಹಕಾರ ಸಂಘಗಳಿಗೆ ಭೇಟಿ ನೀಡಿ ಅವುಗಳ ಕಾರ್ಯವಿಧಾನವನ್ನು ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ರವರಿಗೆ ವರದಿ ಮಾಡುವುದು.
8. ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಶಿಕ್ಷಣ ಕ್ಷೇತ್ರದಲ್ಲಿ ಎಲ್ಲ ಸೌಲಭ್ಯಗಳನ್ನು ಹಾಗೂ ವಿದ್ಯಾರ್ಥಿ ನಿಲಯಗಳಲ್ಲಿನ ಮೂಲಭೂತ ಸೌಕರ್ಯಗಳನ್ನು ಬೇಡಿಕೆ ಪತ್ರ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ರವರಿಗೆ ಮಾಹಿತಿ ಸಲ್ಲಿಸುವುದು.
9. ಎಲ್ಲಾ ಅಭಿವೃದ್ಧಿ ಇಲಾಖೆಯ ಮುಖ್ಯಸ್ಥರಿಂದ ಶೇ 18 ನಿಧಿಯಿಂದ ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗದವರಿಗೆ ವಿವಿಧ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಎಲ್ಲಾ ಇಲಾಖೆಗೆ ಭೇಟಿ ನೀಡುವುದು.
10. ಅನುದಾನಿತ ಸಂಸ್ಥೆಗಳಿಗೆ ಅನುದಾನ ಒದಗಿಸಲು ತಪಾಸಣೆ ನಡೆಸಿ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳು ರವರಿಗೆ ವರದಿ ಸಲ್ಲಿಸುವುದು.
11. ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ನಿರ್ದೇಶನದಂತೆ ಇಲಾಖೆಯ ಇನ್ನಿತರೆ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಕ್ರಮಕೈಗೊಳ್ಳುವುದು.

**ಕಛೇರಿ ಸಿಬ್ಬಂದಿಯವರ ಕರ್ತವ್ಯ ನಿರ್ವಹಣೆ ವಿವರಗಳು**

ತಾಲ್ಲೂಕು ಮಟ್ಟದಲ್ಲಿ ಸಿಬ್ಬಂದಿ ವರ್ಗದವರು ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಅಧಿಕಾರಿಗಳಿಗೆ ಪೂರಕವಾಗಿ ಸಹಾಯಕವಾಗುವಂತೆ ಕಾರ್ಯನಿರ್ವಹಿಸುವರು ಸಾರ್ವಜನಿಕರಿಂದ ಮೇಲಾಧಿಕಾರಿಗಳಿಂದ ಎಲ್ಲಾ ಕಾಗದ ಪತ್ರಗಳನ್ನು ಸಾಮಾನ್ಯ ಸ್ವೀಕೃತಿ ಶಾಖೆಯಲ್ಲಿ ಸ್ವೀಕರಿಸಿ ಅಧಿಕಾರಿಗಳ ಕಿರು ರುಜು ಹಾಕಿಸಿ ಸಂಬಂಧಿಸಿದ ವಿಷಯ ನಿರ್ವಾಹಕರಿಗೆ ಕಳುಹಿಸಿಕೊಡುವುದು.

ತುರ್ತು ಟಪಾಲುಗಳಿಗೆ ಆದ್ಯತೆ ಮೇರೆಗೆ ವಿಷಯ ನಿರ್ವಾಹಕರು ಕಛೇರಿ ಕೈ ಪಿಡಿಯ ಪ್ರಕಾರ ಕಡತವನ್ನು ಪ್ರಾರಂಭಿಸಿ ಅಧಿಕಾರಿಗಳ ಅನುಮೋದನೆ ಪಡೆದು ಕಾರ್ಯನಿರ್ವಹಿಸುವುದು.

ಇಲಾಖಾ ಕಾರ್ಯಕ್ರಮಗಳ ಪ್ರಗತಿ ಪರಿಶೀಲನೆ ಬಗ್ಗೆ ಜಿಲ್ಲಾ ಸಮಾಜ ಕಲ್ಯಾಣ ಅಧಿಕಾರಿಗಳ ಮಾಸಿಕ ಸಭೆಯಲ್ಲಿ ಭಾಗವಹಿಸುವುದು.

ಸರ್ಕಾರವು /ಮೇಲಾಧಿಕಾರಿಗಳು ನೀಡುವ ಆದೇಶಗಳನ್ನು ಹಾಗೂ ಸುತ್ತೋಲೆಗಳನ್ನು ತ್ವರಿತ ಗತಿಯಲ್ಲಿ ಪಾಲಿಸುವುದು.

ಪಿ.ಆರ್. 396 ತಾಲ್ಲೂಕು ಸಮಾಜ ಕಲ್ಯಾಣ ಅಧಿಕಾರಿಗಳು, ಬೀದರ.

**IN THE COURT OF HON'BLE Ist ADDL. CHIEF METROPOLITON MAGISTRATE, BANGALORE CITY**

**Notification**

It is hereby notified for the information of the public that the unclaimed properties mentioned under are in the custody of the Girinagar Police Station, Bangalore city, as unclaimed shall be confiscated to the Government and disposed off according to law if not claimed by the owner with proof of ownership, with in six months from the date of the publication of Notification.

| Sl. No. | Police Station | N.C. No. | P.F.No. | Date of | Detail of Materials |
|---|---|---|---|---|---|
| 1. | Girinagar | 184/02 | 36/02 | 11.04.2002 | One Bajaj K.B.100 Motor Cycle No.KA-01-J-9848 Black Colour Engine No. E30CEO32062 Charsee No. C300EO32724 |
| 2. | Girinagar | 213/02 | 47/02 | 25.04.2002 | One TVS 50 XL No. CAC-7359 Green Colour Charsee No. 81540581 Engine No. 80740581 |
| 3. | Girinagar | 78/03 | 023/03 | 22.02.2003 | One Bajaj Super Scooter No. MEJ-846 Ananda Colour |

Ist Addl. Chief Metropoliton Magistrate,
Bangalore city.

PR-398

**ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿಗಳು**

**ವಿಷಯ:** ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಯಡಮಾರನಹಳ್ಳಿ ಗ್ರಾಮದಲ್ಲಿ ಮಲ್ಟಿಕಲರ್ ಶಿಲೆಗಾಗಿ ಶ್ರೀ ಪ್ರಸನ್ನಗೌಡ ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: 247ರ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:**
1. ಕೇಂದ್ರ ಕಛೇರಿ ಪತ್ರ ಸಂಖ್ಯೆ: ಗಭೂಇ:ಡಿಸಿಬಿ:ಕಗಗು, 247:2001-02 :67172 ದಿನಾಂಕ: 21.5.2002.
2. ಉಪ ನಿರ್ದೇಶಕರು, ಕನಕಪುರ ರವರ ಪತ್ರ ಸಂಖ್ಯೆ: ಗಭೂಇ:ಉನಿಕ: ಕಗಗು:247:2003-04:5424 ದಿನಾಂಕ: 11.8.2003

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕು, ಯಡಮಾರನಹಳ್ಳಿ ಗ್ರಾಮದ ಸರ್ವೆ ನಂ. 368 ಮತ್ತು 369 ರಲ್ಲಿ ಶ್ರೀ ಟಿ. ಪ್ರಸನ್ನಗೌಡ ರವರಿಗೆ 4.00 ಎಕರೆಗೆ ದಿನಾಂಕ: 18.6.1999 ರಿಂದ 10 ವರ್ಷಗಳಿಗಾಗಿ ಕಲ್ಲುಗಣಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (2)ರಲ್ಲಿ ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2003ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ. 2,85,296/- ಗಳನ್ನು ಪಾವತಿಸುವಂತೆ ತಿಳಿಸಲಾಗಿತ್ತು.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ಪತ್ರ 1ರ ಅಂತಿಮ ನೋಟೀಸಿಗೆ ಯಾವ ರೀತಿಯೂ ಸ್ಪಂದಿಸಿರುವುದಿಲ್ಲವಾದ ಕಾರಣ ಹಾಗೂ ಉಲ್ಲೇಖಿತ ಪತ್ರದ 2ರಲ್ಲಿ ತಿಳಿಸಿದಂತೆ ಗುತ್ತಿಗೆಯನ್ನು ನಿಷ್ಕ್ರಿಯವಾಗಿಟ್ಟಿರುವುದರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂಆರ್‌ಸಿ 92 ದಿನಾಂಕ: 2.7.94 ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದಂತೆ ಗುತ್ತಿಗೆಯನ್ನು ರದ್ದುಪಡಿಸಬೇಕಾಗಿದೆ.

**ಆದೇಶ**

**ಆದೇಶ ಸಂಖ್ಯೆ: ಗಭೂಇ:ಡಿಸಿಬಿ:ಕಗಗು:247:2003-04: 19192: ದಿನಾಂಕ: 8ನೇ ಮಾರ್ಚ್ 2004**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 6(1) ಮತ್ತು 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕನಕಪುರ ತಾಲ್ಲೂಕಿನ, ಯಡಮಾರನಹಳ್ಳಿ ಗ್ರಾಮದ ಸರ್ವೆ ನಂ. 368 ಮತ್ತು 369ರಲ್ಲಿ 4.00 ಎಕರೆಗೆ ಮಲ್ಟಿಕಲರ್ ಶಿಲೆಗಾಗಿ ನೀಡಿದ್ದ ಕಲ್ಲುಗಣಿ ಗುತ್ತಿಗೆ ಸಂಖ್ಯೆ: 247ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಲ್ಯಾಪ್ಸ್ಡ್ ಲೀಸ್ ಎಂದು ಪರಿಗಣಿಸಿ ಗುತ್ತಿಗೆಯನ್ನು ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಜಾಮೀನು ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಮಾಡಿಕೊಳ್ಳಲಾಗಿದೆ.

ಪಿ.ಆರ್. 399

ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು.

**PROCEEDINGS OF THE HIGH COURT OF KARNATAKA, BANGALORE**

**Sub :** In the matter of alteration of date of birth enquiry of Smt. B. Pushpanjali, V Addl. I Civil Judge (Jr.Dn.) Mysore, Now working as Civil Judge (Jr.Dn.) and JMFC, Hosakote.

**Read :** Application dated: 11.3.2003 submitted by Smt. B. Pushpanjali, V Addl. I Civil Judge (Jr.Dn.) Mysore, now working as Civil Judge (Jr.Dn.) and JMFC, Hosakote under Section 5(3) (i) (ii) of the Karnataka State Government Servants' (Determination of Age Act) 1974, requesting for alteration of her date of birth from 10.12.1971 to 19.03.1973.

**Preamble:**

The Registrar (Vigilance), Specially Empowered Authority, High Court of Karnataka, Bangalore who has been appointed as the Enquiry Officer under Section 5(3) of the said Act, has considered the application filed by the applicant, held an enquiry under the said Act and after considering the evidence produced by the Officer Smt. B. Pushpanjali, V Addl. I Civil Judge (Jr.Dn.,) Mysore, now working as Civil Judge (Jr.Dn.) and JMFC, Hosakote and the said entire records, submitted his report recommending to accept the prayer of the Officer to alter her date of birth in the Service Records from 10.12.1971 to 19.3.1973.

**Order No. DDB:2:2003 Dated: 3rd March 2004**

The High Court is pleased to accept the findings of the Enquiry Officer viz., Registrar (Vigilance), High Court of Karnataka, Bangalore and accordingly orders that, the date of birth of Smt. B. Pushpanjali, V Addl. I Civil Judge (Jr.Dn.), Mysore, now working as Civil Judge (Jr.Dn.) & JMFC, Hosakote is altered from 10.12.1971 to 19.3.1973 (Tenth day of December one thousand nine hundred seventy one to nineteenth day of March one thousand nine hundred and seventy three) under Sec.5(1) of the Karnataka State Government Servants (Determination of Age) Act, 1974.

By the Order of the High Court,

**A. S. PACHHAPURE**

PR-400 Registrar (Vigilance) & Enquiring Officer.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು ಬೆಂಗಳೂರು**

**ವಿಷಯ :** ಶ್ರೀಮತಿ ವಾಸಂತಿ ಎ ದೇವಳ, ಶುಶ್ರೂಷಕಿ ಕೀಳನಪುರ ಪ್ರಾ. ಆ. ಕೇಂದ್ರ ಮೈಸೂರು ಜಿಲ್ಲೆ.

**ಓದಲಾಗಿದೆ :**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂ:ಡಿಪಿಎನ್ (5) ಸಿಆರ್ 23:98-99, ದಿನಾಂಕ: 16.5.03
2. ವಿಚಾರಣಾಧಿಕಾರಿಗಳು ನೇಮಕಾತಿ ಆದೇಶ ಸಂ: ಡಿಪಿಎನ್ (5) ಸಿಆರ್ 23:98-99, ದಿನಾಂಕ: 21.3.03.
3. ವಿಚಾರಣಾ ವರದಿಯ ಸಂ: ವಿಅ: ವಿಚಾರಣೆ: ಎನ್‌ಜಿ: 70.01.02 ದಿನಾಂಕ: 21.3.03.
4. ವಿಚಾರಣಾ ವರದಿ ನೌಕರರಿಗೆ ಜಾರಿಮಾಡಿದ ಸೂಚನಾ ಪತ್ರದ ಸಂ: ಡಿಪಿಎನ್ (5) ಸಿಆರ್ 23:98-99 ದಿನಾಂಕ: 16.5.03

**ಪ್ರಸ್ತಾವನೆ:**

ಶ್ರೀಮತಿ: ವಾಸಂತಿ ಎ ದೇವಳ, ಶುಶ್ರೂಷಕಿ, ಇವರು ಈ ಹಿಂದೆ ಪ್ರಾ.ಆ. ಕೇಂದ್ರ ಕೀಳನಪುರ, ಮೈಸೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು ದಿನಾಂಕ: 4.9.95 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರಾಗಿದ್ದು ಇವರ ಬಗ್ಗೆ ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು ಸತ್ಯಾ ಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (2)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗ್ರತಾಧಿಕಾರಿಗಳು ಜಾಗ್ರತಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (3)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ, ಮೇಲೆ ಓದಲಾದ (5)ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದು, ನೌಕರರ ಹೇಳಿಕೆ ಸಲ್ಲಿಸಿರುವುದಿಲ್ಲ.

ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್ (5) ಸಿಆರ್ 23-98-99 ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2004**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ.ಜಿ.ಬಿ. ದೇಸಾಯಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀಮತಿ. ವಾಸಂತಿ ಎ. ದೇವಳ, ಶುಶ್ರೂಷಕಿ, ಪ್ರಾ.ಆ. ಕೇಂದ್ರ ಕೀಳನಪುರ, ಮೈಸೂರು ಜಿಲ್ಲೆ ಇವರು ದಿನಾಂಕ: 4.9.95 ರಿಂದ ಇಲ್ಲಿಯವರೆಗೆ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿದ್ದು, ವಿಚಾರಣೆಯಿಂದ ಸಾಬೀತಾಗಿರುವುದರಿಂದ ದಂಡನೆಯಾಗಿ ಸದರಿ ನಿಯಮ 8(8)ರ ಪ್ರಕಾರ ಸೇವೆಯಿಂದ ತೆಗೆದುಹಾಕುವ ದಂಡನೆ ವಿಧಿಸಿದ್ದೇನೆ.

**ಡಾ. ಜಿ. ಬಿ. ದೇಸಾಯಿ**

ಪಿ.ಆರ್.402 ನಿರ್ದೇಶಕರು, ಆರೋಗ್ಯ ಮತ್ತು ಕುಕ. ಸೇವೆಗಳು, ಬೆಂಗಳೂರು-9

**Government of India**

**Ministry of Labour, Labour Bureau,"Cleremont", Shimla-171 004**

**CONSUMER PRICE INDEX NUMBERS FOR INDUSTRIAL WORKERS (BASE-1982=100)**

**No. 112/1(KTK)2001-FLS dated: 6th February 2004**

**State: Karnataka** **Month: December 2003**

| Code | Group/ Sub-group/ Centre | Bangalore | Belgaum | Hublidharwar | Mercara |
|---|---|---|---|---|---|
| 1 | 2 | 3 | 4 | 5 | 6 |
| 1000 | IA: Food | | | | |
| 1100 | (a) Cereals & Products. | 428 | 540 | 467 | 461 |

| 1 | 2 | 3 | 4 | 5 | 6 |
|---|---|---|---|---|---|
| 1200 | (b Pulses and Products | 544 | 539 | 562 | 585 |
| 1300 | (c) Oils & Fats | 416 | 386 | 397 | 392 |
| 1400 | (d) Meat, Fish & Eggs | 564 | 527 | 551 | 631 |
| 1500 | (e) Milk & Products | 357 | 496 | 433 | 425 |
| 1600 | (f) Condiments & Spices. | 511 | 607 | 602 | 510 |
| 1700 | (g) Vegetables & Fruits | 496 | 463 | 557 | 491 |
| 1800 | (h) Other Food | 678 | 696 | 619 | 685 |
| 1000 | I-A Food Group | 496 | 549 | 513 | 525 |
| 2000 | I Pan, Supari, Tobacco & Intoxicants | 654 | 606 | 594 | 509 |
| 3000 | II Fuel and Light | 663 | 631 | 550 | 425 |
| 4000 | III Housing Index | 548 | 650 | 487 | 196 |
| 5000 | IV Clothing, Bedding and Footwear | 270 | 248 | 312 | 408 |
| 6000 | V Miscellaneous | | | | |
| 6100 | (a) Medical care | 483 | 513 | 467 | 498 |
| 6200 | (b) Education, Recreation & Amusement | 421 | 718 | 581 | 638 |
| 6300 | (c) Transport and Communication | 573 | 448 | 576 | 628 |
| 6400 | (d) Personal Care & Effects | 490 | 434 | 487 | 442 |
| 6500 | (e) Others | 481 | 563 | 443 | 468 |
| 6600 | Miscellaneous Group | 486 | 524 | 497 | 505 |
| | **General Index** | 485 | 544 | 503 | 486 |

**R. S. NEGI**
Deputy Director.

**DIRECTORATE OF ECONOMICS AND STATISTICS,**
**GOVERNMENT OF KARNATAKA, BANGALORE-1.**
**Consumer Price Index Numbers for Industrial Workers.**

No. DES 20 PWX 2003 Base:1987-88=100 Month: December 2003
State: Karnataka. Date: 21.02.2004

| | Group/ Sub- Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Mysore | Raichur | Tumkur |
|---|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| I | **FOOD:** | | | | | | | | | | | | |
| | (a) Cereals & Products | 315 | 408 | 346 | 353 | 317 | 339 | 372 | 308 | 276 | 379 | 307 | 366 |
| | (b) Pulses & Products | 262 | 305 | 296 | 328 | 299 | 279 | 302 | 295 | 282 | 293 | 301 | 313 |
| | (c) Oils & Fats | 258 | 253 | 242 | 263 | 290 | 253 | 282 | 306 | 271 | 276 | 259 | 259 |
| | (d) Meat, Fish & Eggs | 303 | 318 | 365 | 455 | 324 | 342 | 315 | 347 | 525 | 343 | 388 | 320 |
| | (e) Milk & Products | 319 | 222 | 263 | 293 | 282 | 262 | 250 | 318 | 267 | 253 | 301 | 258 |
| | (f) Condiments & Spices | 242 | 342 | 353 | 405 | 301 | 299 | 287 | 255 | 245 | 310 | 309 | 316 |
| | (g) Vegetables & fruits | 230 | 274 | 256 | 333 | 275 | 257 | 311 | 329 | 272 | 318 | 228 | 466 |
| | (h) Other Food | 255 | 345 | 314 | 331 | 273 | 289 | 282 | 269 | 271 | 296 | 291 | 329 |
| | **FOOD GROUP** | 285 | 333 | 316 | 342 | 299 | 299 | 315 | 307 | 311 | 318 | 302 | 335 |
| II | Pan, Supari, Tobacco & Intoxicants | 309 | 355 | 355 | 315 | 387 | 408 | 359 | 467 | 294 | 324 | 344 | 387 |
| III | Fuel & Light | 296 | 308 | 265 | 446 | 287 | 314 | 345 | 329 | 270 | 300 | 363 | 291 |
| IV | Housing | 100 | 100 | 100 | 100 | 100 | 100 | 100 | 100 | 100 | 100 | 100 | 100 |
| V | Clothing, Bedding & Foot wear | 255 | 253 | 218 | 373 | 300 | 253 | 321 | 376 | 241 | 291 | 402 | 208 |
| VI | **Miscellaneous:** | | | | | | | | | | | | |
| | (a) Medical Care | 566 | 466 | 370 | 278 | 286 | 262 | 382 | 327 | 336 | 295 | 371 | 219 |
| | (b) Education, Recreation & Amusement | 336 | 311 | 521 | 204 | 388 | 385 | 322 | 319 | 328 | 420 | 370 | 368 |
| | (c) Transport & Communication | 280 | 383 | 327 | 333 | 595 | 340 | 347 | 557 | 347 | 405 | 388 | 358 |
| | (d) Personal Care & effects | 256 | 266 | 243 | 273 | 289 | 251 | 269 | 295 | 265 | 317 | 257 | 261 |
| | (e) Others | 320 | 340 | 277 | 438 | 290 | 269 | 280 | 282 | 238 | 297 | 402 | 246 |
| | Miscellaneous Group Index | 355 | 326 | 328 | 305 | 342 | 295 | 309 | 314 | 292 | 352 | 348 | 280 |
| | **General Index** | 274 | 297 | 280 | 322 | 283 | 272 | 294 | 297 | 278 | 287 | 303 | 271 |
| | **To Convert to Base 1960 Multiply by Linking Factor.** | 7.39 | 9.19 | 8.27 | ... | 8.26 | 8.56 | 9.25 | 7.92 | 9.31 | 9.05 | .. | ... |

**R. S. NEGI**
Deputy Director.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.**

**ಡಿಕ್ರಿ ಆದೇಶ ಸಂಖ್ಯೆ: 596:97-98**

**ಅಮಲ್ಜಾರಿ ಪ್ರಕರಣದ ಸಂಖ್ಯೆ: 701:1998-99**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಕಾರ್ಯದರ್ಶಿ, ಸಿಟಿ ಕೋ-ಆಪರೇಟೀವ್ ಬ್ಯಾಂಕ್ (ನಿ)., ಶಿವಮೊಗ್ಗ | | ಶ್ರೀಮತಿ ಮೀನಾಕ್ಷಿ ಯಾನೆ ನಾಗರತ್ನಮ್ಮ, ಕೋಂ ಚಂದ್ರಪ್ಪ, ಸಕ್ಕರೆ ಕಾರ್ಖಾನೆ ಗುಮಾಸ್ತ, ಕೆರೆ ದುರ್ಗಮ್ಮನಕೇರಿ, ಸೀಗೆಪಟ್ಟಿ, ಶಿವಮೊಗ್ಗ. |

**ವಿಷಯ :** ಸುಸ್ತಿದಾರ ಪ್ರತಿವಾದಿಗಳು ಸಾಲ ಮರುಪಾವತಿ ಮಾಡದ ಪ್ರಯುಕ್ತ ಇವರ ವಿರುದ್ಧ ನ್ಯಾಯಾಲಯದಿಂದ ಪಡೆದ ಅಮಲ್ಜಾರಿ ಆದೇಶದಲ್ಲಿ ಬಹಿರಂಗ ಹರಾಜಿನಲ್ಲಿ ಬಿಡ್ಡುದಾರರು ಭಾಗವಹಿಸದೇ ಇದ್ದ ಪ್ರಯುಕ್ತ ಪ್ರತಿವಾದಿಯ ಸ್ಥಿರಾಸ್ತಿಯನ್ನು ಅರ್ಜಿದಾರರಿಗೆ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101(ಬಿ) ಮೇರೆಗೆ ಸ್ವತ್ತುಗಳ ವರ್ಗಾವಣೆ ಬಗ್ಗೆ.

**ಉಲ್ಲೇಖ :**
1. ಈ ಕಛೇರಿ ಇ.ಪಿ. ಆದೇಶ ಸಂ. 701:98-99
2. ಮಾರಾಟಾಧಿಕಾರಿಗಳ ಪ್ರಸ್ತಾವನೆ ದಿನಾಂಕ: 7.11.03.
3. ಈ ಕಛೇರಿಯಿಂದ ಪ್ರತಿವಾದಿಗಳಿಗೆ ಕೊಟ್ಟ ನೋಟೀಸ್ ದಿನಾಂಕ: 2.1.04

**ಪ್ರಸ್ತಾವನೆ:**

ಅರ್ಜಿದಾರರಾದ ಕಾರ್ಯದರ್ಶಿ, ಸಿಟಿ ಕೋ-ಆಪರೇಟೀವ್ ಬ್ಯಾಂಕ್ (ನಿ), ಶಿವಮೊಗ್ಗ, ಇವರು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರನ್ವಯ ಕಾರ್ಯನಿರ್ವಹಿಸುತ್ತಿದ್ದು, ಈ ಬ್ಯಾಂಕಿನ ಸಾಲಗಾರಳಾದ ಶ್ರೀಮತಿ ಮೀನಾಕ್ಷಿ ಯಾನೆ ನಾಗರತ್ನಮ್ಮ ಕೋಂ ಚಂದ್ರಪ್ಪ, ಕೆರೆ ದುರ್ಗಮ್ಮನ ಕೇರಿ, ಸೀಗೆಹಟ್ಟಿ, ಶಿವಮೊಗ್ಗ, ಇವರು ಅರ್ಜಿದಾರರ ಬ್ಯಾಂಕಿನಿಂದ ರೂ.25000-00ಗಳ ಸಾಲವನ್ನು ಪಡೆದು ಮರುಪಾವತಿ ಮಾಡದೇ ಇದ್ದುದರ ಪ್ರಯುಕ್ತ ಬ್ಯಾಂಕಿನ ಹಣವನ್ನು ಭರ್ತಿಸಿಕೊಳ್ಳಲು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರ ಅಡಿಯಲ್ಲಿ ದಾವೆಯನ್ನು ಹೂಡಿ ಪ್ರತಿವಾದಿಗಳ ವಿರುದ್ಧ ಆದೇಶ ಸಂಖ್ಯೆ: 596:97-98 ದಿನಾಂಕ: 19.1.1998ರ ಪ್ರಕಾರ ಡಿಕ್ರಿ ಪಡೆದು ನಿಯಮಾನುಸಾರ ವಸೂಲಿ ಕ್ರಮ ಕೈಗೊಂಡಿದ್ದಾರೆ. ಈ ಪ್ರಾಧಿಕಾರಕ್ಕೆ ಡಿಕ್ರಿಯ ಅಮಲ್ ಬಜಾವಣೆಯ ಕಾಯ್ದೆ 1959ರ ರೀತ್ಯಾ ದಿನಾಂಕ: 22.10.1998 ರಂದು ಅರ್ಜಿ ಸಲ್ಲಿಸಿ, ಅಮಲ್ಜಾರಿ ಪಡೆದ ನಂತರವು ಸಾಲಗಾರರು ತಾವು ಪಡೆದ ಸಾಲವನ್ನು ಬ್ಯಾಂಕಿಗೆ ಮರುಪಾವತಿ ಮಾಡದ ಪ್ರಯುಕ್ತ ಅರ್ಜಿದಾರರ ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ನಿಯಮಾನುಸಾರ ವಸೂಲಿ ಕ್ರಮಕ್ಕಾಗಿ ಸೂಚಿಸಿ, ಅಧಿಕಾರ ನೀಡಿ ಸಾಲ ವಸೂಲಿ ಮಾಡಲು ಆದೇಶಿಸಲಾಗಿತ್ತು.

ಸದರೀ ಮಾರಾಟಾಧಿಕಾರಿಗಳು ನಿಯಮಾನುಸಾರ ವಸೂಲಿ ಕ್ರಮ ಜರುಗಿಸಿ ಅಂತಿಮವಾಗಿ ಡಿಕ್ರಿ ಬಾಕಿದಾರರ ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ: 19.5.2003 ರಂದು ಬಹಿರಂಗ ಹರಾಜಿಗೆ ಗುರಿಪಡಿಸಿದ್ದರು. ಹಾಗೂ ಹರಾಜಿನ ದಿನಕ್ಕೆ ಮೂರು ದಿನ ಮುಂಚಿತವಾಗಿ ಬ್ಯಾಂಕಿನ ಆಡಳಿತ ವ್ಯಾಪ್ತಿಗೆ ಒಳಪಡುವ ಕಾರ್ಯವ್ಯಾಪ್ತಿಯಲ್ಲಿ ಟಾಂ ಟಾಂ ಮುಖೇನ ಸತತವಾಗಿ ಪ್ರಚುರಪಡಿಸಲಾಗಿತ್ತು. ಬಹಿರಂಗ ಹರಾಜಿನ ಇಸ್ತಿಹಾರ್ ಪ್ರಕಟಣೆಯನ್ನು ಬ್ಯಾಂಕಿನ ನಾಮಫಲಕ ಹಾಗೂ ಸಾರ್ವಜನಿಕರ ಕಛೇರಿ ಸ್ಥಳಗಳಲ್ಲಿಯೂ ಪ್ರಕಟಿಸಲಾಗಿತ್ತು. ಆದರೆ ಬಿಡ್ಡುದಾರರುಗಳು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸದೇ ಇದ್ದ ಪ್ರಯುಕ್ತ ಡಿಕ್ರಿ ಬಾಕಿದಾರರ ಸ್ಥಿರ ಸ್ವತ್ತುಗಳನ್ನು ಬ್ಯಾಂಕಿಗೆ ಬರಬೇಕಾದ ಅಸಲು, ಬಡ್ಡಿ ಮತ್ತು ಸುಸ್ತಿ ಬಡ್ಡಿ ಇತರೆ ವೆಚ್ಚ ಸೇರಿ ರೂ. 64000-00 ಗಳನ್ನು ಮರುಪಾವತಿ ಮಾಡದಿದ್ದುದರಿಂದ ಬ್ಯಾಂಕಿನ ಹೆಸರಿಗೆ ಸ್ಥಿರಸ್ವತ್ತುಗಳನ್ನು ವರ್ಗಾವಣೆ ಮಾಡಲು ಈ ಪ್ರಾಧಿಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುವುದನ್ನು ಪರಿಶೀಲಿಸಿ, ಈ ಕ್ರಮದ ಪೂರ್ವದಲ್ಲಿ ಮಾರಾಟಾಧಿಕಾರಿಗಳು, ಸಾಲಗಾರರಿಗೆ ಫಾರಂ ನಂ. ಡಿ 2 ಮತ್ತು 6 ನ್ನು ಹಾಗೂ ನಮೂನೆ-8 ಮತ್ತು 9 ನೋಟೀಸುಗಳನ್ನು ಬಾಕಿದಾರರಿಗೆ ಜಾರಿ ಮಾಡಿ, ಸಾರ್ವಜನಿಕ ಬಹಿರಂಗ ಹರಾಜಿಗೆ ಬಿಡ್ಡುದಾರರ ಅಭಾವದಿಂದ ಸದರಿ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101(ಬಿ) ಮೇರೆಗೆ ಸ್ಥಿರಾಸ್ತಿಯ ಖಾತೆಗಾಗಿ ಮತ್ತು ಉಲ್ಲೇಖ (2)ರ ಪ್ರಕಾರ ಡಿಕ್ರಿ ಹೊಂದಿದ ಬ್ಯಾಂಕಿನ ಹೆಸರಿಗೆ ವರ್ಗಾಯಿಸುವಂತೆ ಕೋರಿದ್ದಾರೆ.

ಉಲ್ಲೇಖ (3)ರ ಪ್ರಕಾರ ನಿಯಮ 38(ಎ) ಅನ್ವಯ ಈ ಬಗ್ಗೆ ಡಿಕ್ರಿ ಬಾಕಿದಾರರಿಗೆ ದಿನಾಂಕ: 2.1.2004 ರಂದು ನೋಟೀಸ್ ನೀಡಿದ್ದು, ಸದರೀ ನೋಟೀಸನ್ನು ಪ್ರತಿವಾದಿಗಳು ಸ್ವತಃ ಪಡೆದಿದ್ದರೂ ಡಿಕ್ರಿ ಮೊತ್ತವನ್ನು ಪಾವತಿ ಮಾಡದೇ ಇದ್ದುದರಿಂದ ಸ್ಥಿರಾಸ್ತಿಯ ವರ್ಗಾವಣೆ ಆದೇಶ ಕೋರಿದ ಪ್ರಸ್ತಾವನೆಯು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101(ಬಿ) ಹಾಗೂ ನಿಯಮ 38(ಎ) ಪ್ರಕಾರ ಸಮಂಜಸವಾಗಿದೆ ಎಂದು ಕಂಡು ಬಂದಿದ್ದರಿಂದ ಡಿಕ್ರಿ ಬಾಕಿದಾರರ ಸ್ಥಿರಾಸ್ತಿಯನ್ನು ಅರ್ಜಿದಾರರ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಲು ಆದೇಶವನ್ನು ನೀಡಲಾಗಿದೆ.

**ಆದೇಶ**

**ಕ್ರಮಾಂಕ:ಸನಿಶಿ:24:ಎಬಿಎಸ್:ಇಪಿ:2003-04 ದಿನಾಂಕ: 27ನೇ ಫೆಬ್ರವರಿ 2004**

ಎ. ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101(ಬಿ) ರನ್ವಯ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಕ್ರಮಾಂಕ: ಸಿಎಂಡಬ್ಲ್ಯೂ:69:ಸಿಎಲ್ಎಂ:01 ದಿನಾಂಕ: 21.11.2001ರ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಶ್ರೀಮತಿ ಮೀನಾಕ್ಷಿ ಯಾನೆ

ನಾಗರತ್ನಮ್ಮ, ಕೋಂ ಚಂದ್ರಪ್ರ, ಕೆರೆ ದುರ್ಗಮ್ಮನ ಕೇರಿ, ಸೀಗೆಹಟ್ಟಿ, ಶಿವಮೊಗ್ಗ ಇವರ ಈ ಕೆಳಕಂಡ ಷೆಡ್ಯೂಲ್ ಸ್ಥಿರಾಸ್ತಿಯನ್ನು ರೂ. 65028-00 ಗಳಿಗೆ ಡಿಕ್ರಿ ಹೋಲ್ಡರ್ ಬ್ಯಾಂಕಿನ ಹೆಸರಿಗೆ ಸ್ಥಿರಾಸ್ತಿಯ ಖಾತೆ ಮತ್ತು ಪಹಣಿಯ ವರ್ಗಾವಣೆಗೆ ಆದೇಶ ನೀಡಿರುತ್ತೇನೆ. ಕಾಯ್ದೆಯನ್ವಯ ನಮೂನೆ-8 ನ್ನು ನಿಗದಿತ ನಮೂನೆಯನ್ನು ಸ್ಥಿರಸ್ವತ್ತಿನ ವರ್ಗಾವಣೆ ಪತ್ರವನ್ನು ಅಲಾಯಿದ ನೀಡಿರುವುದನ್ನು ಈ ಆದೇಶಕ್ಕೆ ಲಗತ್ತಿಸಿದೆ.

**ಷೆಡ್ಯೂಲ್ ಸ್ಥಿರ ಸ್ವತ್ತಿನ ವಿವರ**

| ಕ್ರ. ಸಂ. | ಸ್ಥಿರಾಸ್ತಿ ಇರುವ ಸ್ಥಳ | ಸರ್ವೆನಂ. | ವಿಸ್ತೀರ್ಣ | ತರಹೆ | ಡಿಕ್ರಿ ಹೊಂದಿನ ಹಕ್ಕಿನ ಸ್ವಭಾವ |
|---|---|---|---|---|---|
| 1. | ಕೆರೆ ದುರ್ಗಮ್ಮನ ಕೇರಿ, ಶಿವಮೊಗ್ಗ ನಗರ. | ಮುನಿಸಿಪಲ್ ಖಾತೆ ನಂ. 572:554 572:4 299:299 | 9 x 10 | ಮಂಗಳೂರು ಹೆಂಚಿನ ಮನೆ | ಶ್ರೀಮತಿ ಮಿನಾಕ್ಷಿ ಯಾನೆ ನಾಗರತ್ನಮ್ಮ ಕೋಂ ಚಂದ್ರಪ್ಪ, ಕೆರೆ ದುರ್ಗಮ್ಮನ ಕೇರಿ, ಶಿವಮೊಗ್ಗ. |

ಈ ಆದೇಶವನ್ನು ಕಛೇರಿಯ ಮುದ್ರೆ ಮತ್ತು ನನ್ನ ಸಹಿಯೊಂದಿಗೆ ದಿನಾಂಕ: 27.2.2004 ರಂದು ಹೊರಡಿಸಿ, ಸದರೀ ಸ್ಥಿರ ಸ್ವತ್ತನ್ನು ಅರ್ಜಿದಾರರಾದ ಕಾರ್ಯದರ್ಶಿ, ಸಿಟಿ ಕೋ-ಆಪರೇಟೀವ್ ಬ್ಯಾಂಕ್ (ನಿ), ಶಿವಮೊಗ್ಗ ಇವರ ಹೆಸರಿಗೆ ವರ್ಗಾವಣೆ ಮಾಡಿ ಆದೇಶಿಸಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಇವರ ನ್ಯಾಯಾಲಯದಲ್ಲಿ**

**ನಮೂನೆ-8**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101 ಮತ್ತು ನಿಯಮ 1960ರ ರೂಲ್ 38(ಎ) ಮೇರೆಗೆ ಸ್ಥಿರ ಸ್ವತ್ತಿನ ವರ್ಗಾವಣೆಯ ಬಗ್ಗೆ "ಪ್ರಮಾಣಪತ್ರ"

ಸಿಟಿ ಕೋ-ಆಪರೇಟೀವ್ ಬ್ಯಾಂಕ್ (ನಿ), ಶಿವಮೊಗ್ಗ ಇವರ ಪರವಾಗಿ 1959ನೇ ಇಸ್ವಿಯ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮದ ಕಲಂ 71 ರನ್ವಯ ನಿರ್ಣಯಿಸಿ ನೀಡಲಾದ ಐತೀರ್ಪು (ಅವಾರ್ಡ್)ಗಳನ್ನು ಜಾರಿ ಮಾಡುವುದರ ಕ್ರಮದಲ್ಲಿ ವ್ಯಕ್ತಿಗಳ (ಸಾಲಗಾರರ) ಈ ಕೆಳಗೆ ನಮೂದಿಸಿದ ಸ್ವತ್ತಿನ ಮಾರಾಟದ ಬಗ್ಗೆ ದಿನಾಂಕ: 15.3.03 ರಂದು ಆಜ್ಞೆಯನ್ನು ಮಾಡಲಾಗಿರುತ್ತದಷ್ಟೆ ಮತ್ತು ಖರೀದಿಸುವವರ ಅಭಾವದಿಂದಾಗಿ ಸದರೀ ಸ್ವತ್ತನ್ನು ಹರಾಜು ಮಾಡಲು ಸಾಧ್ಯವಾಗದ್ದೆಂದು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಇವರು ಮನಗಂಡಿರುತ್ತಾರೆ.

ಆದ್ದರಿಂದ ಸದರೀ ಸ್ವತ್ತಿನಲ್ಲಿನ ಸಾಲಗಾರನ ಅಧಿಕಾರ ಹಕ್ಕು ಮತ್ತು ಹಿತಾಸಕ್ತಿಗಳು ವಗೈರೆ, ಸದರಿ ಬ್ಯಾಂಕಿನಲ್ಲಿ ವಿಲೀನವಾಗತಕ್ಕದ್ದೆಂದು ಮತ್ತು ಇದಕ್ಕೆ ಜೋಡಿಸಲಾದ ಅನುಸೂಚಿಯಲ್ಲಿ ವಿಧಿಸಲಾದ ಷರತ್ತುಗಳಿಗೂ ಮತ್ತು ನಿಯಮಗಳಿಗೊಳಪಟ್ಟು ಸದರೀ ಬ್ಯಾಂಕಿಗೆ ಸ್ವತ್ತುಗಳನ್ನು ಒಪ್ಪಿಸಿಕೊಡತಕ್ಕದ್ದೆಂದು ಕಲಂ 101(ಬಿ) ಮೇರೆಗೆ ಈ ಮೂಲಕ ಆಜ್ಞೆ ಮಾಡಲಾಗಿರುತ್ತದೆ.

| ಗ್ರಾಮ | ಸರ್ವೆನಂ. | ವಿಸ್ತೀರ್ಣ | ಕಂದಾಯ | ಸಾಲಗಾರಹಕ್ಕಿನ ಅಧಿಕಾರ ಮತ್ತು ಹಿತಾಸಕ್ತಿ ವಗೈರೆಗಳ ಸ್ವರೂಪ | ಸ್ವತ್ತು ಒಳಪಡಿಸಲ್ಪಟ್ಟಿರುವ ಸಾಲ ಬೋಜಗಳ ವಿವರ |
|---|---|---|---|---|---|
| ಕೆರೆದುರ್ಗಮ್ಮನ ಕೇರಿ, ಶಿವಮೊಗ್ಗ. | ಮುನಿಸಿಪಲ್ ಖಾತೆ ನಂ. 572:554 572:4 299:299 | 9 x 10 | - | ಶ್ರೀಮತಿ ಮೀನಾಕ್ಷಿ ಯಾನೆ, ನಾಗರತ್ನಮ್ಮ ಕೋಂ ಚಂದ್ರಪ್ಪ, ಕೆರೆದುರ್ಗಮ್ಮನ ಕೇರಿ, ಶಿವಮೊಗ್ಗ. | ಅಮಲ್ಜಾರಿ ನಂ. 701: 98-99 ದಾವಾ ನಂ. 598: 97-98 |

ಸಾಲಗಾರರಿಂದ ಸದರಿ ಬ್ಯಾಂಕಿಗೆ ಬರತಕ್ಕ ಮೊತ್ತದ ಸಂಪೂರ್ಣ ಸಂದಾಯದ ಬಗ್ಗೆ ಸದರೀ ಸ್ವತ್ತುಗಳನ್ನು ವರ್ಗಾವಣೆ ಮಾಡಲ್ಪಟ್ಟಿದೆ.

**ಷರತ್ತು ನಿಯಮಗಳು**

1. ಬ್ಯಾಂಕಿಗೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತನ್ನು ಬ್ಯಾಂಕೇ ಉಪಯೋಗಿಸತಕ್ಕದ್ದು.
2. ಪುನಃ ಮಾರಾಟ ಮಾಡಲಾಗುವ ಸಂದರ್ಭದಲ್ಲಿ ಸ್ಥಿರಾಸ್ತಿಯ ಡಿಕ್ರಿ ಬಾಕಿದಾರರ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡತಕ್ಕದ್ದು.
3. ಈ ಮಾರಾಟ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗೆ ಹಣವನ್ನು ಬ್ಯಾಂಕಿನ ಸಾಲದ ಖಾತೆಗೆ ಜಮಾ ಖರ್ಚು ಮಾಡಿಕೊಳ್ಳತಕ್ಕದ್ದು.

ಈ ದಿನ ದಿನಾಂಕ: 27.2.2004 ರಂದು ನನ್ನ ರುಜು ಹಾಗೂ ಕಛೇರಿ ಮೊಹರಿನೊಂದಿಗೆ ಈ ಪ್ರಮಾಣಪತ್ರವನ್ನು ಕೊಡಲ್ಪಟ್ಟಿದೆ.

ಪಿ.ಆರ್.403 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಚಾಮರಾಜಪೇಟೆ, ಬೆಂಗಳೂರು-18**
**ಇವರ ಕಾರ್ಯಾಲಯ**

**ಕ್ರಮಾಂಕ: ಡಿಆರ್‌ಬಿ-1 ನೋಂ: ರದ್ದತಿ:28:2003-04 ದಿನಾಂಕ: 28ನೇ ಫೆಬ್ರವರಿ 2004**

**ವಿಷಯ :** ಸಮಾಪನೆಯಲ್ಲಿರುವ ವಿನಾಯಕ ನಗರ ಬಳಕೆದಾರರ ಸಹಕಾರ ಸಂಘ ನಿ., 2ನೇ ಕ್ರಾಸ್, ವಿನಾಯಕ ನಗರ, ಮೈಸೂರು ರಸ್ತೆ, ಬೆಂಗಳೂರು-26 ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :**
1. ಇದೇ ಕಛೇರಿ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ-1: ಸಮಾಪನೆ:34:2000-01 ದಿನಾಂಕ:31.3.2001.
2. ಸಮಾಪನಾಧಿಕಾರಿ ದಕ್ಷಿಣ-2 ಇವರ ಪತ್ರ ದಿನಾಂಕ: 30.1.2004.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಪತ್ರ ದಿನಾಂಕ: ಸನಿಬೆ: 44:ಸಮಾಪನೆ 91:2003-04 ದಿನಾಂಕ:31.1.2004

**ಪ್ರಸ್ತಾವನೆ:**

ವಿನಾಯಕ ನಗರ ಬಳಕೆದಾರರ ಸಹಕಾರ ಸಂಘ ನಿ., 2ನೇ ಕ್ರಾಸ್, ವಿನಾಯಕ ನಗರ, ಮೈಸೂರು ರಸ್ತೆ, ಬೆಂಗಳೂರು-26 ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ ಇವರ ಆದೇಶ ಸಂಖ್ಯೆ: ಎಆರ್‌ಬಿ-1:ಬಿ:ಆರ್‌ಇಜಿಎನ್: 15029: 87-88 ದಿನಾಂಕ: 23.9.1987ರಲ್ಲಿ ನೋಂದಣಿಯಾಗಿದ್ದು, ಹಲವಾರು ವರ್ಷಗಳಿಂದ ಈ ಸಂಘವು ಯಾವುದೇ ಕೆಲಸ ನಿರ್ವಹಿಸದೆ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಇದೇ ಕಛೇರಿ ಆದೇಶದಲ್ಲಿ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 72 ರಡಿಯಲ್ಲಿ ಸಮಾಪನೆಗೊಳಿಸಿ ಆದೇಶ ಹೊರಡಿಸಿ ಸಹಕಾರ ಸಂಘಗಳ ನಿರೀಕ್ಷಕರು ದಕ್ಷಿಣ-2 ಇವರನ್ನು ಸಮಾಪನಾಧಿಕಾರಿಯವರನ್ನಾಗಿ ನೇಮಕಮಾಡಲಾಗಿತ್ತು.

ಉಲ್ಲೇಖ (2)ರಲ್ಲಿ ಸಂಘದ ಸಮಾಪನಾಧಿಕಾರಿಗಳು ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಠರಾವು ಮಾಡಿ ಶಿಫಾರಸ್ಸು ಮಾಡಿರುವಂತೆ ಉಲ್ಲೇಖ (3)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ ಬೆಂಗಳೂರು ಇವರು ಈ ಸಂಘದ ನೋಂದಣಿಯನ್ನು ರದ್ದುಮಾಡಲು ಈ ಕೆಳಗಿನ ಕಾರಣಗಳನ್ನು ನೀಡಿ ಈ ಕಚೇರಿಗೆ ಶಿಫಾರಸ್ಸು ಮಾಡಿರುತ್ತಾರೆ.

1. ಈ ಸಂಘವು ನೋಂದಾಯಿತ ವಿಳಾಸದಲ್ಲಿ ಅಥವಾ ಇನ್ನಾವುದೇ ವಿಳಾಸದಲ್ಲಿ ಕಾರ್ಯನಿರ್ವಹಿಸದೇ ಅಸ್ಥಿತ್ವದಲ್ಲಿಲ್ಲದ ಕಾರಣ ಈ ಸಂಘದ ಲೆಕ್ಕ ಪುಸ್ತಕಗಳನ್ನು ಪ್ರಭಾರ ವಹಿಸಿಕೊಳ್ಳಲು ಸಾಧ್ಯವಾಗದೇ ಇದ್ದ ಕಾರಣ ಸಂಘದ ಸಮಾಪನಾಧಿಕಾರಿಗಳು ದಿನಾಂಕ: 23.7.2002 ರಂದು ಈ ಸಂಘದ ಸಮಾಪನಾಧಿಕಾರಿಯಾಗಿ ಸ್ವಯಂಪ್ರಭಾರ ವಹಿಸಿಕೊಂಡಿರುತ್ತಾರೆ.
2. ಕಛೇರಿಯಲ್ಲಿನ ಲಭ್ಯ ದಾಖಲೆಗಳನ್ನು ಪರಿಶೀಲಿಸಲಾಗಿ ಈ ಸಂಘವು ಸರ್ಕಾರದಿಂದ ಯಾವುದೇ ಷೇರು ಅಥವಾ ಸಾಲವನ್ನು ಪಡೆದಿರುವುದಿಲ್ಲ.
3. ಲೆಕ್ಕ ಪರಿಶೋಧನಾ ಇಲಾಖೆಯಲ್ಲಿ ಈ ಸಂಘದ ಲೆಕ್ಕ ಪರಿಶೋಧನೆ ನಡೆಸಿರುವ ಬಗ್ಗೆ ಯಾವುದೇ ವರದಿಗಳು ದೊರಕಿರುವುದಿಲ್ಲ.
4. ಈ ಸಂಘವು ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರಿ ಬ್ಯಾಂಕಿನಲ್ಲಿ ಯಾವುದೇ ಖಾತೆಯನ್ನು ಹೊಂದಿರುವುದಿಲ್ಲ.

ಮೇಲಿನ ಅಂಶಗಳನ್ನು ವಿವರಿಸಿ ಸಮಾಪನಾಧಿಕಾರಿಗಳು ಈ ಸಂಘವು ಅಸ್ತಿತ್ವದಲ್ಲಿಲ್ಲದೇ ಇರುವುದರಿಂದ ಇದರ ನೋಂದಣಿಯನ್ನು ರದ್ದುಪಡಿಸಲು ಕೋರಿದ್ದಾರೆಂದು ಸಹಾಯಕ ನಿಬಂಧಕರು ವಿವರಿಸಿ ಈ ಸಂಘವು ಅಸ್ಥಿತ್ವದಲ್ಲಿಲ್ಲದೇ ಇರುವುದರಿಂದ ಈ ಸಂಘದ ನೋಂದಣಿಯನ್ನು ರದ್ದುಪಡಿಸಿದಲ್ಲಿ ಸಾರ್ವಜನಿಕರಿಗಾಗಲೀ, ಸದಸ್ಯರಿಗಾಗಲೀ, ಸರ್ಕಾರಕ್ಕಾಗಲೀ ಯಾವುದೇ ನಷ್ಟ ಉಂಟಾಗುವುದಿಲ್ಲವೆಂದು ತಿಳಿಸಿ ಈ ಸಂಘದ ನೋಂದಣಿಯನ್ನು ಮುಂದುವರಿಸಿಕೊಂಡು ಹೋಗುವುದರಿಂದ ಪ್ರಯೋಜನವಿಲ್ಲದ ಕಾರಣ ರದ್ದುಪಡಿಸಿ ಆದೇಶ ಹೊರಡಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:243: ಸಿಎಲ್‌ಎಂ:91 ದಿನಾಂಕ: 4.5.94 ಮತ್ತು 13.1.97ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಎ.ಕುಮಾರ್, ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ನೋಂದಣಿ ಸಂಖ್ಯೆ: ಎಆರ್‌ಬಿ-1:ಬಿ:ಆರ್‌ಇಜಿಎನ್:15029:87-88 ರಲ್ಲಿ ನೋಂದಣಿಯಾದ ವಿನಾಯಕ ನಗರ ಬಳಕೆದಾರರ ಸಹಕಾರ ಸಂಘ ನಿ., 2ನೇ ಕ್ರಾಸ್, ವಿನಾಯಕ ನಗರ, ಮೈಸೂರು ರಸ್ತೆ, ಬೆಂಗಳೂರು-26 ಈ ಸಂಘದ ನೋಂದಣಿಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ ಈ ದಿನದಿಂದ ಈ ಸಂಘವು ಕಾರ್ಪೊರೇಟ್ ಬಾಡಿಯಾಗಿರುವ ಅಸ್ತಿತ್ವವನ್ನು ಕಳೆದುಕೊಂಡಿದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ: 28.2.2004 ರಂದು ಹೊರಡಿಸಲಾಗಿದೆ.

ಪಿ.ಆರ್.404 ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಚಾಮರಾಜಪೇಟೆ, ಬೆಂಗಳೂರು-18**

**ಇವರ ಕಾರ್ಯಾಲಯ**

**ಕ್ರಮಾಂಕ: ಡಿಆರ್‌ಬಿ-1:ನೋಂ: ರದ್ದತಿ:29:2003-04 ದಿನಾಂಕ: 28ನೇ ಫೆಬ್ರವರಿ 2004**

**ವಿಷಯ :** ಸಮಾಪನೆಯಲ್ಲಿರುವ ಸಾಯಿ ವರ್ಕರ್ಸ್ ಸಹಕಾರ ಸಂಘ ನಿ., ಮಾಗಡಿ ರಸ್ತೆ, ಬೆಂಗಳೂರು, ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :**
1. ಇದೇ ಕಛೇರಿ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ-1: ಎಲ್‌ಕ್ಯೂಡಿ:4:98-99 ದಿನಾಂಕ:29.9.98
2. ಸಮಾಪನಾಧಿಕಾರಿ ದಕ್ಷಿಣ-2 ಇವರ ಪತ್ರ ದಿನಾಂಕ: 30.1.2004.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಪತ್ರ ದಿನಾಂಕ: ಸನಿಬೆ: 44: ಸಮಾಪನೆ 88:2003-04 ದಿನಾಂಕ:5.2.2004

**ಪ್ರಸ್ತಾವನೆ:**

ಸಾಯಿ ವರ್ಕರ್ಸ್ ಸಹಕಾರ ಸಂಘ ನಿ., ಮಾಗಡಿ ರಸ್ತೆ, ಬೆಂಗಳೂರು, ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರಿಂದ ನೋಂದಣಿಯಾಗಿದ್ದು, ಹಲವಾರು ವರ್ಷಗಳಿಂದ ಈ ಸಂಘವು ಯಾವುದೇ ಕೆಲಸ ನಿರ್ವಹಿಸದೆ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಇದೇ ಕಛೇರಿ ಆದೇಶದಲ್ಲಿ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 72 ರಡಿಯಲ್ಲಿ ಸಮಾಪನೆಗೊಳಿಸಿ ಆದೇಶ ಹೊರಡಿಸಿ ಸಹಕಾರ ಸಂಘಗಳ ನಿರೀಕ್ಷಕರು ದಕ್ಷಿಣ-2 ಇವರನ್ನು ಸಮಾಪನಾಧಿಕಾರಿಯವರನ್ನಾಗಿ ನೇಮಕಮಾಡಲಾಗಿತ್ತು.

ಉಲ್ಲೇಖ (2)ರಲ್ಲಿ ಸಂಘದ ಸಮಾಪನಾಧಿಕಾರಿಗಳು ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಠರಾವು ಮಾಡಿ ಶಿಫಾರಸ್ಸು ಮಾಡಿರುವಂತೆ ಉಲ್ಲೇಖ (3)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ ಬೆಂಗಳೂರು ಇವರು ಈ ಸಂಘದ ನೋಂದಣಿಯನ್ನು ರದ್ದುಮಾಡಲು ಈ ಕೆಳಗಿನ ಕಾರಣಗಳನ್ನು ನೀಡಿ ಈ ಕಚೇರಿಗೆ ಶಿಫಾರಸ್ಸು ಮಾಡಿರುತ್ತಾರೆ.

1. ಈ ಸಂಘವು ನೋಂದಾಯಿತ ವಿಳಾಸದಲ್ಲಿ ಅಥವಾ ಇನ್ನಾವುದೇ ವಿಳಾಸದಲ್ಲಿ ಕಾರ್ಯನಿರ್ವಹಿಸದೇ ಅಸ್ತಿತ್ವದಲ್ಲಿಲ್ಲದ ಕಾರಣ ಈ ಸಂಘದ ಲೆಕ್ಕ ಪುಸ್ತಕಗಳನ್ನು ಪ್ರಭಾರ ವಹಿಸಿಕೊಳ್ಳಲು ಸಾಧ್ಯವಾಗದೇ ಇದ್ದ ಕಾರಣ ಸಂಘದ ಸಮಾಪನಾಧಿಕಾರಿಗಳು ದಿನಾಂಕ: 23.7.2002 ರಂದು ಈ ಸಂಘದ ಸಮಾಪನಾಧಿಕಾರಿಯಾಗಿ ಸ್ವಯಂಪ್ರಭಾರ ವಹಿಸಿಕೊಂಡಿರುತ್ತಾರೆ.
2. ಕಛೇರಿಯಲ್ಲಿನ ಲಭ್ಯ ದಾಖಲೆಗಳನ್ನು ಪರಿಶೀಲಿಸಲಾಗಿ ಈ ಸಂಘವು ಸರ್ಕಾರದಿಂದ ಯಾವುದೇ ಷೇರು ಅಥವಾ ಸಾಲವನ್ನು ಪಡೆದಿರುವುದಿಲ್ಲ.
3. ಲೆಕ್ಕ ಪರಿಶೋಧನಾ ಇಲಾಖೆಯಲ್ಲಿ ಈ ಸಂಘದ ಲೆಕ್ಕ ಪರಿಶೋಧನೆ ನಡೆಸಿರುವ ಬಗ್ಗೆ ಯಾವುದೇ ವರದಿಗಳು ದೊರಕಿರುವುದಿಲ್ಲ.
4. ಈ ಸಂಘವು ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರಿ ಬ್ಯಾಂಕಿನಲ್ಲಿ ಯಾವುದೇ ಖಾತೆಯನ್ನು ಹೊಂದಿರುವುದಿಲ್ಲ.

ಮೇಲಿನ ಅಂಶಗಳನ್ನು ವಿವರಿಸಿ ಸಮಾಪನಾಧಿಕಾರಿಗಳು ಈ ಸಂಘವು ಅಸ್ಥಿತ್ವದಲ್ಲಿಲ್ಲದೇ ಇರುವುದರಿಂದ ಇದರ ನೋಂದಣಿಯನ್ನು ರದ್ದುಪಡಿಸಲು ಕೋರಿದ್ದಾರೆಂದು ಸಹಾಯಕ ನಿಬಂಧಕರು ವಿವರಿಸಿ ಈ ಸಂಘವು ಅಸ್ಥಿತ್ವದಲ್ಲಿಲ್ಲದೇ ಇರುವುದರಿಂದ ಈ ಸಂಘದ ನೋಂದಣಿಯನ್ನು ರದ್ದುಪಡಿಸಿದಲ್ಲಿ ಸಾರ್ವಜನಿಕರಿಗಾಗಲೀ, ಸದಸ್ಯರಿಗಾಗಲೀ, ಸರ್ಕಾರಕ್ಕಾಗಲೀ ಯಾವುದೇ ನಷ್ಟ ಉಂಟಾಗುವುದಿಲ್ಲವೆಂದು ತಿಳಿಸಿ ಈ ಸಂಘದ ನೋಂದಣಿಯನ್ನು ಮುಂದುವರಿಸಿಕೊಂಡು ಹೋಗುವುದರಿಂದ ಪ್ರಯೋಜನವಿಲ್ಲದ ಕಾರಣ ರದ್ದುಪಡಿಸಿ ಆದೇಶ ಹೊರಡಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:243: ಸಿಎಲ್‌ಎಂ:91 ದಿನಾಂಕ: 4.5.94 ಮತ್ತು 13.1.97ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಎ.ಕುಮಾರ್, ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ನಾನು ಸಾಯಿ ವರ್ಕರ್ಸ್ ಸಹಕಾರ ಸಂಘ ನಿ., ಮಾಗಡಿ ರಸ್ತೆ, ಬೆಂಗಳೂರು ಈ ಸಂಘದ ನೋಂದಣಿಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ ಈ ದಿನದಿಂದ ಈ ಸಂಘವು ಕಾರ್ಪೊರೇಟ್ ಬಾಡಿಯಾಗಿರುವ ಅಸ್ತಿತ್ವವನ್ನು ಕಳೆದುಕೊಂಡಿದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ: 28.2.2004 ರಂದು ಹೊರಡಿಸಲಾಗಿದೆ.

ಪಿ.ಆರ್.405 ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

**ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಚಾಮರಾಜಪೇಟೆ, ಬೆಂಗಳೂರು-18**
**ಇವರ ಕಾರ್ಯಾಲಯ**

**ಕ್ರಮಾಂಕ: ಡಿಆರ್‌ಬಿ-1ನೋಂ: ರದ್ದತಿ:30:2003-04 ದಿನಾಂಕ: 28ನೇ ಫೆಬ್ರವರಿ 2004**

**ವಿಷಯ :** ಸಮಾಪನೆಯಲ್ಲಿರುವ ಶ್ರೀರಾಮಪುರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು, ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ :**
1. ಇದೇ ಕಛೇರಿ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಬಿ-1: ಎಲ್‌ಕ್ಯೂಡಿ:60:96-97 ದಿನಾಂಕ:17.12.96
2. ಸಮಾಪನಾಧಿಕಾರಿ ದಕ್ಷಿಣ-1 ಇವರ ಪತ್ರ ದಿನಾಂಕ: 27.1.2004.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ ಬೆಂಗಳೂರು ಇವರ ಪತ್ರ ದಿನಾಂಕ: ಸನಿಬೆ:44:ಸಮಾಪನೆ 86:2003-04 ದಿನಾಂಕ:5.2.2004

**ಪ್ರಸ್ತಾವನೆ:**

ಶ್ರೀರಾಮಪುರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು, ಈ ಸಂಘವು ನೋಂದಣಿ ಸಂಖ್ಯೆ: ಡಿವೈಆರ್:375:1953 ರನ್ವಯ ನೋಂದಣಿಯಾಗಿದ್ದು ಹಲವಾರು ವರ್ಷಗಳಿಂದ ಈ ಸಂಘವು ಯಾವುದೇ ಕೆಲಸ ನಿರ್ವಹಿಸದೆ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಇದೇ ಕಛೇರಿ ಆದೇಶದಲ್ಲಿ ಈ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ ಕಲಂ 72 ರಡಿಯಲ್ಲಿ ಸಮಾಪನೆಗೊಳಿಸಿ ಆದೇಶ ಹೊರಡಿಸಿ ಸಹಕಾರ ಸಂಘಗಳ ನಿರೀಕ್ಷಕರು ದಕ್ಷಿಣ-1 ಇವರನ್ನು ಸಮಾಪನಾಧಿಕಾರಿಯವರನ್ನಾಗಿ ನೇಮಕಮಾಡಲಾಗಿತ್ತು.

ಉಲ್ಲೇಖ (2)ರಲ್ಲಿ ಸಂಘದ ಸಮಾಪನಾಧಿಕಾರಿಗಳು ಈ ಸಂಘದ ನೋಂದಣಿಯನ್ನು ರದ್ದುಪಡಿಸಲು ಠರಾವು ಮಾಡಿ ಶಿಫಾರಸ್ಸು ಮಾಡಿರುವಂತೆ ಉಲ್ಲೇಖ (3)ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ ಬೆಂಗಳೂರು ಇವರು ಈ ಸಂಘದ ನೋಂದಣಿಯನ್ನು ರದ್ದುಮಾಡಲು ಈ ಕೆಳಗಿನ ಕಾರಣಗಳನ್ನು ನೀಡಿ ಈ ಕಚೇರಿಗೆ ಶಿಫಾರಸ್ಸು ಮಾಡಿರುತ್ತಾರೆ.

1. ಈ ಸಂಘವು ನೋಂದಾಯಿತ ವಿಳಾಸದಲ್ಲಿ ಅಥವಾ ಇನ್ನಾವುದೇ ವಿಳಾಸದಲ್ಲಿ ಕಾರ್ಯನಿರ್ವಹಿಸದೇ ಅಸ್ಥಿತ್ವದಲ್ಲಿಲ್ಲದ ಕಾರಣ ಈ ಸಂಘದ ಲೆಕ್ಕ ಪುಸ್ತಕಗಳನ್ನು ಪ್ರಭಾರ ವಹಿಸಿಕೊಳ್ಳಲು ಸಾಧ್ಯವಾಗದೇ ಇದ್ದ ಕಾರಣ ಸಂಘದ ಸಮಾಪನಾಧಿಕಾರಿಗಳು ದಿನಾಂಕ: 27.2.2002 ರಂದು ಈ ಸಂಘದ ಸಮಾಪನಾಧಿಕಾರಿಯಾಗಿ ಸ್ವಯಂಪ್ರಭಾರ ವಹಿಸಿಕೊಂಡಿರುತ್ತಾರೆ.
2. ಕಛೇರಿಯಲ್ಲಿನ ಲಭ್ಯ ದಾಖಲೆಗಳನ್ನು ಪರಿಶೀಲಿಸಲಾಗಿ ಈ ಸಂಘವು ಸರ್ಕಾರದಿಂದ ಯಾವುದೇ ಷೇರು ಅಥವಾ ಸಾಲವನ್ನು ಪಡೆದಿರುವುದಿಲ್ಲ.
3. ಲೆಕ್ಕ ಪರಿಶೋಧನಾ ಇಲಾಖೆಯಲ್ಲಿ ಈ ಸಂಘದ ಲೆಕ್ಕ ಪರಿಶೋಧನೆ ನಡೆಸಿರುವ ಬಗ್ಗೆ ಯಾವುದೇ ವರದಿಗಳು ದೊರಕಿರುವುದಿಲ್ಲ.
4. ಈ ಸಂಘವು ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲಾ ಸಹಕಾರಿ ಬ್ಯಾಂಕಿನಲ್ಲಿ ಯಾವುದೇ ಖಾತೆಯನ್ನು ಹೊಂದಿರುವುದಿಲ್ಲ.
5. ಈ ಸಂಘದ ಅಸ್ಥಿತ್ವದ ಬಗ್ಗೆ ಮಾಹಿತಿ ಹಾಗೂ ಆಕ್ಷೇಪಣೆಗಳನ್ನು ನೀಡುವಂತೆ ದಿನಾಂಕ: 18.3.2001ರ "ಈ ಸಂಜೆ" ದಿನಪತ್ರಿಕೆಯಲ್ಲಿ ಪ್ರಕಟಣೆ ನೀಡಿದ್ದರೂ ಸಹ ಯಾರೂ ಈವರೆಗೆ ಆಕ್ಷೇಪಣೆ ಸಲ್ಲಿಸಿಲ್ಲವೆಂದು ತಿಳಿಸಿದೆ.

ಮೇಲಿನ ಅಂಶಗಳನ್ನು ವಿವರಿಸಿ ಸಮಾಪನಾಧಿಕಾರಿಗಳು ಈ ಸಂಘವು ಅಸ್ಥಿತ್ವದಲ್ಲಿಲ್ಲದೇ ಇರುವುದರಿಂದ ಇದರ ನೋಂದಣಿಯನ್ನು ರದ್ದುಪಡಿಸಲು ಕೋರಿದ್ದಾರೆಂದು ಸಹಾಯಕ ನಿಬಂಧಕರು ವಿವರಿಸಿ ಈ ಸಂಘವು ಅಸ್ಥಿತ್ವದಲ್ಲಿಲ್ಲದೇ ಇರುವುದರಿಂದ ಈ ಸಂಘದ ನೋಂದಣಿಯನ್ನು ರದ್ದುಪಡಿಸಿದಲ್ಲಿ ಸಾರ್ವಜನಿಕರಿಗಾಗಲೀ, ಸದಸ್ಯರಿಗಾಗಲೀ, ಸರ್ಕಾರಕ್ಕಾಗಲೀ ಯಾವುದೇ ನಷ್ಟ ಉಂಟಾಗುವುದಿಲ್ಲವೆಂದು ತಿಳಿಸಿ ಈ ಸಂಘದ ನೋಂದಣಿಯನ್ನು ಮುಂದುವರಿಸಿಕೊಂಡು ಹೋಗುವುದರಿಂದ ಪ್ರಯೋಜನವಿಲ್ಲದ ಕಾರಣ ರದ್ದುಪಡಿಸಿ ಆದೇಶ ಹೊರಡಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಶಿಫಾರಸ್ಸನ್ನು ಪರಿಗಣಿಸಿ ಈ ಸಂಘದ ನೋಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 75 ರನ್ವಯ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:243: ಸಿಎಲ್‌ಎಂ:91 ದಿನಾಂಕ: 4.5.94 ಮತ್ತು 13.1.97ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಎ.ಕುಮಾರ್, ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ನೋಂದಣಿ ಸಂಖ್ಯೆ: ಡಿವೈಆರ್:375:1953ರಲ್ಲಿ ನೋಂದಣಿಯಾದ ಶ್ರೀರಾಮಪುರ ಗೃಹ ನಿರ್ಮಾರ್ಣ ಸಹಕಾರ ಸಂಘ ನಿ., ಬೆಂಗಳೂರು ಈ ಸಂಘದ ನೋಂದಣಿಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ. ಈ ದಿನದಿಂದ ಈ ಸಂಘವು ಕಾರ್ಪೊರೇಟ್ ಬಾಡಿಯಾಗಿರುವ ಅಸ್ತಿತ್ವವನ್ನು ಕಳೆದುಕೊಂಡಿದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಮತ್ತು ಈ ಕಛೇರಿಯ ಮೊಹರಿನೊಂದಿಗೆ ಈ ದಿನ ಅಂದರೆ ದಿನಾಂಕ: 28.2.2004 ರಂದು ಹೊರಡಿಸಲಾಗಿದೆ.

ಪಿ.ಆರ್.406 ಸಹಕಾರ ಸಂಘಗಳ ಉಪ ನಿಬಂಧಕರು-1, ಬೆಂಗಳೂರು ನಗರ ಜಿಲ್ಲೆ.

## ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ದಿನಾಂಕ: 1.1.2002ಕ್ಕೆ ಅನ್ವಯಿಸುವಂತೆ ಕೈಮಗ್ಗ ಮತ್ತು ಜವಳಿ ಇಲಾಖೆಯ ಸಹಾಯಕ ನಿರ್ದೇಶಕರ ಅಂತಿಮ ಜೇಷ್ಠತಾ ಪಟ್ಟಿ**

**ಸಂಖ್ಯೆ: ವಾಕೈ 48 ಜಕೈಸೇ 2002 ದಿನಾಂಕ: 4ನೇ ಮಾರ್ಚ್ 2004**

ವೇತನ ಶ್ರೇಣಿ ರೂ.6300-150-7200-200-8800-260-10880-320 -11840

| ಕ್ರಮ ಸಂಖ್ಯೆ | ಅಧಿಕಾರಿಯವರ ಹೆಸರು | ನೇ.ನೆ. ಮುಂಬಡ್ತಿ ವರ್ಗಾವಣೆ (ವಿಲೀನತೆ) | ಮೀಸಲಾತಿ ವರ್ಗ | ಹುಟ್ಟಿದ ತಾರೀಖು | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಅವಿಚಿನ್ನಾ ಸೇವೆಯ ತಾರೀಖು | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಶ್ರೀ ಆನಂದ್ ವಿ. ಕಿತ್ತೂರ | ತಾಂತ್ರಿಕ ಸಹಾಯಕ ಅಧಿಕಾರಿಯಿಂದ ಸ್ಥಾನಪನ್ನ ಮುಂಬಡ್ತಿ | ಜಿ.ಎಂ. | 21.02.60 | 10.09.85 | 12.09.2001 | |
| 2. | ಶ್ರೀ ವಿಜಯಕುಮಾರ್ ಬಿ. ನಿರಾಳೆ | -”- | ಜಿ.ಎಂ. | 30.03.60 | 10.09.85 | 12.09.2001 | |
| 3. | ಶ್ರೀ ಝುರಪ್ಪ ಜಿ. ಮೊಳಕೇರಿ | -”- | ಎಸ್.ಟಿ | 22.12.60 | 23.09.85 | 12.09.2001 | |
| 4. | ಶ್ರೀ ಸಿ.ಎಸ್. ಯೋಗೀಶ್ | -”- | ಜಿ.ಎಂ. | 22.06.67 | 07.01.94 | 12.09.2001 | |
| 5. | ಶ್ರೀ ಎಸ್. ಪ್ರಕಾಶ್ | -”- | ಜಿ.ಎಂ. | 14.04.66 | 11.07.94 | 12.09.2001 | |
| 6. | ಶ್ರೀ ಬಿ. ಶ್ರೀಧರ್ ನಾಯಕ್ | -”- | ಎಸ್.ಟಿ | 30.04.70 | 03.01.94 | 12.09.2001 | |
| 7. | ಶ್ರೀ ಹೆಚ್. ಎಸ್. ಸೋಮನಗೌಡರ್ | -”- | ಜಿ.ಎಂ. | 15.10.61 | 10.01.94 | 12.09.2001 | |
| 8. | ಶ್ರೀ ಎ. ಸುರೇಶ್‌ಕುಮಾರ್ | -”- | ಎಸ್.ಸಿ | 07.06.65 | 10.01.94 | 12.09.2001 | |
| 9. | ಶ್ರೀ ಎಸ್. ಮುದ್ದಯ್ಯ | -”- | ಎಸ್.ಸಿ | 01.01.64 | 15.07.94 | 12.09.2001 | |

**ಎಂ. ಕರಿಯಪ್ಪ**

ಪಿ.ಆರ್.407 ಸರ್ಕಾರದ ಉಪ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು

**ವಿಷಯ :** ಶ್ರೀಮತಿ ಎಸ್. ಲಲಿತಾ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಆಕೇಂದ್ರ, ಮಲ್ಲಂದೂರು, ಚಿಕ್ಕಮಗಳೂರು ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಇಲಾಖೆ ವಿಚಾರಣೆ-ಅಂತಿಮ ಆದೇಶ.

**ಓದಲಾಗಿದೆ :**

1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂ:ಡಿಪಿಎನ್ (16) ಸಿಆರ್:05: 99-00 ದಿನಾಂಕ: 17.7.2001.
2. ನೌಕರರ ಲಿಖಿತ ಅಹವಾಲು ಪತ್ರ ಸಲ್ಲಿಸಿರುವುದಿಲ್ಲ.
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂ: ಡಿಪಿಎಸ್ (16)ಸಿಆರ್: 05: 99-2000 ದಿನಾಂಕ: 18.1.2002.
4. ವಿಚಾರಣಾ ವರದಿಯ ಸಂ:ವಿಆ:ವಿಚಾರಣೆ:ಎನ್‌ಜಿ:123:01-02 ದಿನಾಂಕ: 30.7.2003.
5. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂ: ಡಿಪಿಎನ್ (16)ಸಿಆರ್:15:99-2000 ದಿನಾಂಕ: 26.8.2003.
6. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ: 8.9.2003.

**ಪ್ರಸ್ತಾವನೆ:**

ಶ್ರೀಮತಿ ಎಸ್. ಲಲಿತಾ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಇವರು ಈ ಹಿಂದೆ ಪ್ರಾಆಕೇಂದ್ರ, ಕಕ್ಕೇರಾ, ಗುಲಬರ್ಗಾ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 18.9.97 ರಿಂದ 10.3.2002 ರವರೆಗೆ ಅನಧಿಕೃತ ಗೈರುಹಾಜರಿ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2)ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುವುದಿಲ್ಲ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು (ಜಾ.ಕೋ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (4)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ, ಮೇಲೆ ಓದಲಾದ (5)ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (6)ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾರೆ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂ: ಡಿಪಿಎನ್ (16) ಸಿಆರ್:05:99-2000, ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2004**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಜಿ. ಬಿ. ದೇಸಾಯಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀಮತಿ ಎಸ್. ಲಲಿತಾ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಇವರು ಪ್ರಾಆಕೇಂದ್ರ, ಕಕ್ಕೇರಾ, ಗುಲ್ಬರ್ಗಾ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 18.9.97 ರಿಂದ 10.3.2002 ರವರೆಗೆ ಅನಧಿಕೃತ ಗೈರು ಹಾಜರಿಗೆ, ದಂಡನೆಯಾಗಿ ಸದರಿ ನಿಯಮ 8(7)ರ ಪ್ರಕಾರ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ಕೂಡಲೇ ಜಾರಿಗೆ ಬರುವಂತೆ ವಿಧಿಸಿದ್ದೇನೆ.

**ಡಾ: ಜಿ. ಬಿ. ದೇಸಾಯಿ**

ಪಿ.ಆರ್.409 ನಿರ್ದೇಶಕರು, ಆರೋಗ್ಯ ಮತ್ತು ಕು.ಕ. ಸೇವೆಗಳು, ಬೆಂಗಳೂರು.

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ಅಧಿಸೂಚನೆ ನಂ. ಎಲ್‌ಆರ್‌ಎಫ್ (ಕಲಂ.109) ಸಿಆರ್:06:2003-04 ದಿನಾಂಕ: 8ನೇ ಮಾರ್ಚ್ 2004**

ಕೋಲಾರ ತಾಲ್ಲೂಕು ವಕ್ಕಲೇರಿ ಹೋಬಳಿ ಚೊಕ್ಕಹಳ್ಳಿ ಗ್ರಾಮದ ಸ.ನಂ. 54:2 ರಲ್ಲಿ 1 ಎಕರೆ 20 ಗುಂಟೆ 54:3 ರಲ್ಲಿ 1-00 ಎಕರೆ ಮತ್ತು ಸ.ನಂ. 54:4 ರಲ್ಲಿ 1-00 ಎಕರೆ ಹೀಗೆ ಒಟ್ಟು 3 ಎಕರೆ 20 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಅಂದರೆ ಶಾಲಾ ಕಟ್ಟಡ ನಿರ್ಮಾಣಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109ರ ಅಡಿಯಲ್ಲಿ ಅನುಮತಿ ನೀಡಲು ಕೋರಿ ಮುಖ್ಯ ಆಡಳಿತಾಧಿಕಾರಿಗಳು ಕರ್ನಾಟಕ ಚಿನ್ಮಯ ಸೇವಾ ಟ್ರಸ್ಟ್ (ರಿ) ಬೆಂಗಳೂರು ರವರು ನಮೂನೆ 15ಎ ರಲ್ಲಿ ಅರ್ಜಿಯನ್ನು ಸಲ್ಲಿಸಿ ತತ್ಸಂಬಂಧ ಹಾಜರುಪಡಿಸಿರುವ ದಾಖಲೆಗಳಿಗೆ ಸಂಬಂಧಿಸಿದಂತೆ ತಹಶೀಲ್ದಾರ್ ಕೋಲಾರ ತಾಲ್ಲೂಕು ರವರು ಕಡತ ತಯಾರಿಸಿ ಸಲ್ಲಿಸಿರುವ ಮಾಹಿತಿಯನ್ನು ಅನುಸರಿಸಿ ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರು ಪತ್ರ ಸಂ. ಎಲ್‌ಆರ್‌ಎಫ್: ಸಿಆರ್:9:2003-04 ದಿನಾಂಕ: 12.2.2004 ರಂತೆ ಪ್ರಸ್ತಾವನೆಯನ್ನು ಸಲ್ಲಿಸಿ ಅರ್ಜಿದಾರರಿಗೆ ಮೇಲ್ಕಂಡ ಜಮೀನುಗಳನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961ರ ಕಲಂ 109ರಂತೆ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ಮೇಲ್ಕಂಡ ಜಮೀನುಗಳ ಖಾತೆ ಶ್ರೀ ಗಣಪತಿ ರಾವ್ ಬಿನ್ ಆನಂದ್ ರಾವ್ ಎಂಬುವರ ಹೆಸರಿನಲ್ಲಿದ್ದು ಈ ಜಮೀನುಗಳನ್ನು ಅರ್ಜಿದಾರರಿಗೆ ದಾನವಾಗಿ ನೀಡಲು ಒಪ್ಪಿ ದಿನಾಂಕ: 11.12.2003 ರಂದು ದಾನದ ಕರಾರು ಪತ್ರವನ್ನು ಬರೆಸಿಕೊಟ್ಟಿರುತ್ತಾರೆ. ಮೇಲ್ಕಂಡ ಜಮೀನುಗಳು ಹಿಡುವಳಿ ಜಮೀನುಗಳಾಗಿದ್ದು ಈ ಜಮೀನುಗಳು ಭೂ ಮಂಜೂರಾತಿ ಕಾಯ್ದೆ ಹಾಗೂ ನಿಯಮ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕರ್ನಾಟಕ ಇನಾಂ ರದ್ದಿಯಾತಿ ಕಾಯ್ದೆ ಮತ್ತು ಕರ್ನಾಟಕ ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್)ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ.

ಅರ್ಜಿದಾರರ ಟ್ರಸ್ಟ್ ನಂ. 478: 85-86 ದಿನಾಂಕ: 5.11.1985 ರಂತೆ ಉಪ ನೋಂದಣಾಧಿಕಾರಿಗಳು ಶಿವಾಜಿನಗರ ಬೆಂಗಳೂರು ಇವರ ಕಛೇರಿಯಲ್ಲಿ ನೋಂದಾವಣೆಯಾಗಿರುತ್ತದೆ. ಕ್ಷೇತ್ರ ಶಿಕ್ಷಣಾಧಿಕಾರಿಗಳು ಕೋಲಾರ ರವರು ಇವರ ಕಛೇರಿಯ ಜ್ಞಾಪನ ನಂ. ಸಿಬ್ಬಂದಿ (2) (ಅನು) 378 ಶಾನೋಂ ಅನು 25:2003-04 ದಿನಾಂಕ: 11.3.2003 ರಂತೆ ಚಿನ್ಮಯ ವಿದ್ಯಾಲಯ ಚೊಕ್ಕಹಳ್ಳಿ ಇದನ್ನು ನೋಂದಾಯಿಸಿರುತ್ತಾರೆ. ಹಾಗೂ 1 ರಿಂದ 5ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ತರಗತಿಗಳನ್ನು 2002-03ರ ಶೈಕ್ಷಣಿಕ ಸಾಲಿನಿಂದ ಪ್ರಾರಂಭಿಸಲು ಅನುಮತಿಯನ್ನು ನೀಡಿರುತ್ತಾರೆ.

ದಿನಾಂಕ: 25.02.2004 ರಂದು ನಾನು ಮೇಲ್ಕಂಡ ಜಮೀನುಗಳ ಸ್ಥಳ ತನಿಖೆ ಮಾಡಿರುತ್ತೇನೆ ಮೇಲ್ಕಂಡ ಜಮೀನುಗಳು ಶೈಕ್ಷಣಿಕ ಸಂಸ್ಥೆ ನಡೆಸಲು ಸೂಕ್ತವಾದ ಪ್ರದೇಶವಾಗಿರುತ್ತೆ. ಈ ಜಮೀನುಗಳಲ್ಲಿ ಸರ್ಕಾರಕ್ಕೆ ಕಾಯ್ದಿರಿಸಿಕೊಳ್ಳಬೇಕಾಗಿರುವ ಬಾಬುಗಳು ಯಾವುದೂ ಇರುವುದಿಲ್ಲ. ಮೇಲ್ಕಂಡ ಜಮೀನುಗಳನ್ನು ದಾನವಾಗಿ ಪಡೆಯಲು ಅರ್ಜಿದಾರರಿಗೆ ಅನುಮತಿ ನೀಡುವ ಬಗ್ಗೆ ಗ್ರಾಮಸ್ಥರಿಂದ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ.

ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (1) (ii) ರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ ನಾಲ್ಕು ಯೂನಿಟ್‌ವರೆಗೆ ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದ್ದು ಈ ಸಂಬಂಧ ಸರ್ಕಾರದ ಅಧಿಸೂಚನೆ ನಂ. ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.4.2003 (ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 2002 ರಂತೆ) ಶೈಕ್ಷಣಿಕ ಉದ್ದೇಶಕ್ಕಾಗಿ 2 ಯೂನಿಟ್‌ವರೆಗೆ ಜಮೀನನ್ನು ಖರೀದಿಸಲು: ದಾನವಾಗಿ ಪಡೆಯಲು ಅನುಮತಿ: ವಿನಾಯಿತಿಯನ್ನು ನೀಡಲು ಜಿಲ್ಲಾಧಿಕಾರಿಗಳಿಗೆ ಅಧಿಕಾರ ನೀಡಿರುತ್ತೆ. ಇದರಂತೆ ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109ಕ್ಕೆ ಅನುಗುಣವಾಗಿ ಇರುವುದರಿಂದ ಕೋಲಾರ ತಾಲ್ಲೂಕು ವಕ್ಕಲೇರಿ ಹೋಬಳಿ ಚೊಕ್ಕಹಳ್ಳಿ ಗ್ರಾಮದ ಸ.ನಂ. 54:2 ರಲ್ಲಿ 1 ಎಕರೆ 20 ಗುಂಟೆ 54:3 ರಲ್ಲಿ 1-00 ಎಕರೆ ಮತ್ತು ಸ.ನಂ.54:4ರಲ್ಲಿ 1 ಎಕರೆ ಹೀಗೆ ಒಟ್ಟು 3 ಎಕರೆ 20 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ (ಶಾಲಾ ಕಟ್ಟಡ ನಿರ್ಮಾಣಕ್ಕಾಗಿ) ದಾನವಾಗಿ ಪಡೆಯಲು ಮುಖ್ಯ ಆಡಳಿತಾಧಿಕಾರಿಗಳು ಕರ್ನಾಟಕ ಚಿನ್ಮಯ ಸೇವಾ ಟ್ರಸ್ಟ್ (ರಿ) ಬೆಂಗಳೂರು ರವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 79 ಬಿ ಮತ್ತು 80ಕ್ಕೆ ವಿನಾಯಿತಿಯನ್ನು ನೀಡಿ ಮೇಲ್ಕಂಡ ಜಮೀನುಗಳನ್ನು ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣಾ ಕಾಯ್ದೆ 1961ರ ಕಲಂ 109 (1) (ii) ರಡಿಯಲ್ಲಿ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ದಾನವಾಗಿ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು 2 ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.

2. ವಿನಾಯಿತಿ: ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ 1956ರ ಕಲಂ 3ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯ್ದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ: ಓಡಿಪಿ ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಜಮೀನುಗಳನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
6. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961ರ ಕಲಂ 109 ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ಬಿ. ಎಸ್. ರಾಮಪ್ರಸಾದ್

ಪಿ.ಆರ್.410 ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

**IN THE COURT OF COMMISSIONER FOR WORKMEN'S COMPENSATION, BIDAR.**
**No: LOB/WCA/CR/13/2004**

**Applicants:**
1. Vidyawathi W/o Budh Age 20 years Occ: Household R/o Shantinagar Jai Bheemanagar Chowk Navadgeri Bidar.

**V/s**

**Respondents:**
1. Arti. W/o Basawaraj & Age: Major Occ: Household Business R/o Ningdalli Tq Aurad Dist Bidar
2 United India Insurance Co. Ltd., Bidar.

**PROCLAIMATION**

Sri/Smt. Vidhyawathi W/o. Budhu R/o Shantinagar Jai Bheemnagar Chowk Navadgeri Dist Bidar. have/has filed application in this court claiming compensation stating that late: Budhu working as Driver Under the Respondent No. I he met with an accident arising out of and during the course of employment as a result he died on 29.9.2003

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclaimation, if no applications or objections are received within the specified date the court will proceeded further in the matter.

PR-412 Commissioner For Workmen's Compensation, Bidar.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ,**

**ಭದ್ರಾವತಿ ವಿಭಾಗ, ಭದ್ರಾವತಿ**

**ಅಧಿಸೂಚನೆ ಸಂಖ್ಯೆ:ಎಫ್‌ಓಸಿ:ಸಿಓಎನ್:ಸಿಆರ್:20/03-04 ದಿನಾಂಕ: 10ನೇ ಮಾರ್ಚ್ 2004**

ಭದ್ರಾವತಿ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಭದ್ರಾವತಿ ವಲಯದ ಸಿಬ್ಬಂದಿಯವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಸದರಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 (ಎ)ರ ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನಗಳ ವಿವರ | ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1. | ದ್ವಿಚಕ್ರವಾಹನ ಸುಜುಕಿ ಮ್ಯಾಕ್ಸ್ 100-ಆರ್- ನಂ: ಕೆಎ-14-ಹೆಚ್-7118 (4 ಕೆ.ಜಿ.) ಶ್ರೀಗಂಧದ 9 ತುಂಡುಗಳು ಹಾಗೂ ಚಕ್ಕೆ ಚೂರುಗಳು) | ಭದ್ರಾವತಿ ವಲಯದ ಅ.ಮೊ.ಸಂಖ್ಯೆ: 252/ 03-04 ದಿನಾಂಕ: 8.3.2004. | 1505 ಎಂ 552912 | 1505 ಎಫ್509261 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೂ ಹಾಜರಾಗದೇ ಇರುವುದರಿಂದ ಸದರಿ ವಾಹನದ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕುಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೆ ಉತ್ಪನ್ನವನ್ನು ಕಳ್ಳ ಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಸಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಸಹಿದಾರರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ

ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71 (ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಪಿ.ಆರ್. 413 ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

**ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ) ಬೆಂಗಳೂರು, ಇವರ ನಡವಳಿಗಳು**

**ವಿಷಯ :** ರಾಷ್ಟ್ರೀಯ ಹೆದ್ದಾರಿ-4 ರಲ್ಲಿರುವ ನಿಪ್ಪಾಣಿ (ಹೊರ) ತನಿಖಾಠಾಣೆಯನ್ನು ಸ್ಥಳಾಂತರಿಸುವ ಬಗ್ಗೆ-ಆದೇಶ.

**ಉಲ್ಲೇಖ :** ವಾಣಿಜ್ಯ ತೆರಿಗೆ ಅಧಿಕಾರಿ (ಗುವಾ) ಬೆಳಗಾಂ, ಇವರ ಪತ್ರ ಸಂಖ್ಯೆ: ವಾತೆಅ:ಮಾತೆಶೊಠಾ: ಹೊರ: ನಿಪ್ಪಾಣಿ: ಸಿಆರ್-03-04, ದಿನಾಂಕ: 17.2.2004.

**ಪ್ರಸ್ತಾವನೆ:**

ಉಲ್ಲೇಖದ ಪತ್ರದಲ್ಲಿ, ವಾಣಿಜ್ಯ ತೆರಿಗೆ ಅಧಿಕಾರಿ, ಮಾರಾಟ ತೆರಿಗೆ ಶೋಧನಾಠಾಣೆ (ಹೊರ) ನಿಪ್ಪಾಣಿ, ಇವರು ತಮ್ಮ ಉಲ್ಲೇಖಿತ ಪತ್ರದಲ್ಲಿ, ಸದ್ಯದಲ್ಲಿ ಶೋಧನಾ ಠಾಣೆಯು ತಾತ್ಕಾಲಿಕವಾಗಿ ಇರುವ ಮುಖ್ಯ ರಸ್ತೆಯ ಎರಡೂ ಅಂಚಿನಲ್ಲಿ ಲೋಕೋಪಯೋಗಿ ಇಲಾಖೆಯವರು ನೀರು ಪೂರೈಕೆ ಪೈಪುಗಳನ್ನು ಹಾಕಲು ಹಳ್ಳವನ್ನು ಅಗೆದಿದ್ದು ಯಾವುದೇ ವಾಹನಗಳು ಬರಲು ಸಂಪರ್ಕರಸ್ತೆ ಇಲ್ಲದಂತೆ ಆಗಿರುವುದಾಗಿಯೂ, ಹಾಗೂ ಶೋಧನಠಾಣೆಗಾಗಿ ಮಂಜೂರಾಗಿರುವ ಸ್ಥಳದ ಎದಿರು ರಸ್ತೆಯು ಹದಿನೈದು ಅಡಿಗಳಷ್ಟು ಮೇಲ್ಮಟ್ಟದಲ್ಲಿದ್ದು ಅಲ್ಲಿಂದ ಸಂಪರ್ಕರಸ್ತೆಯು ನಿರ್ಮಿಸಲು ತಡವಾಗುವುದರಿಂದ ಸದರಿ ಸ್ಥಳದಿಂದ ಸುಮಾರು ಒಂದು ಕಿಲೋಮೀಟರ್ ದೂರದಲ್ಲಿರುವ ಸ್ಟಾರ್ ಹೋಟೆಲ್ ಹತ್ತಿರ ಇರುವ ಖಾಲಿ ಜಾಗದಲ್ಲಿ ಸಂಪರ್ಕ ರಸ್ತೆ ಮತ್ತು ಮುಖ್ಯರಸ್ತೆಯು ಸಮಪಾತಳಿಯಲ್ಲಿದ್ದು, ಅಲ್ಲಿ ಶೋಧನಾಠಾಣೆಯನ್ನು ತಾತ್ಕಾಲಿಕವಾಗಿ ನಿರ್ಮಿಸಿಕೊಳ್ಳಲು ಅನುಮತಿ ಕೋರಿರುತ್ತಾರೆ. ಹಾಗೂ ಸದರಿ ಸ್ಥಳದ ಮಾಲೀಕರು ಯಾವುದೇ ರೀತಿಯ ಬಾಡಿಗೆ ಇಲ್ಲದೆ ತಮ್ಮ ಸ್ಥಳವನ್ನು ತನಿಖಾಠಾಣೆ ಸ್ಥಾಪನೆಗೆ ಬಿಟ್ಟುಕೊಡಲು ಒಪ್ಪಿರುತ್ತಾರೆಂದು ತಿಳಿಸಿರುತ್ತಾರೆ.

ವಾಣಿಜ್ಯ ತೆರಿಗೆ ಅಧಿಕಾರಿಗಳ ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಹಾಗೂ ಈ ಹಿನ್ನೆಲೆಯಲ್ಲಿ ತನಿಖಾಠಾಣೆಯ ಕಟ್ಟಡದ ನಿರ್ಮಾಣ ಮತ್ತು ಸಂಪರ್ಕರಸ್ತೆಯ ಕೆಲಸ ಪೂರ್ಣಗೊಳ್ಳುವವರೆಗೆ ರಾಷ್ಟ್ರೀಯ ಹೆದ್ದಾರಿ-4 ರಲ್ಲಿರುವ ನಿಪ್ಪಾಣಿ(ಹೊರ) ಶೋಧನಾಠಾಣೆ ಕಾರ್ಯವನ್ನು ಸ್ಟಾರ್ ಹೋಟೆಲ್ ಬಳಿ ಇರುವ ಖಾಲಿ ಜಾಗದಲ್ಲಿ ತಾತ್ಕಾಲಿಕ ಶೆಡ್ ನಿರ್ಮಿಸಿಕೊಂಡು ನಿರ್ವಹಿಸುವ ಸಂಬಂಧ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ವಾತೆಅಆ (ಗು ಮತ್ತು ಸ) ವಾತೆಅ-1:ಸಿಆರ್-44:03-04, ದಿನಾಂಕ: 17ನೇ ಫೆಬ್ರವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ರಾಷ್ಟ್ರೀಯ ಹೆದ್ದಾರಿ-4 ರಲ್ಲಿರುವ ನಿಪ್ಪಾಣಿ (ಹೊರ) ಶೋಧನಾಠಾಣೆ ಕಾರ್ಯವನ್ನು ಸದ್ಯದ ತನಿಖಾಠಾಣೆಯಿಂದ ಒಂದು ಕಿ.ಮೀ. ದೂರದಲ್ಲಿರುವ ಸ್ಟಾರ್ ಹೋಟೆಲ್ ಬಳಿ ಇರುವ ಖಾಲಿ ಜಾಗದಲ್ಲಿ ತಾತ್ಕಾಲಿಕ ಶೆಡ್ ನಿರ್ಮಿಸಿಕೊಂಡು ಕಾರ್ಯನಿರ್ವಹಿಸಲು ನಿರ್ಧರಿಸಿ ಸ್ಥಳಾಂತರಿಸಲು, ಕ.ಮಾ.ತೆ. ಕಾಯ್ದೆ 1957ರ ಪ್ರಕರಣ 28ಎ, ಉಪ ಪ್ರಕರಣ 1ರ ಅನ್ವಯ ಪ್ರದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಅಶೋಕ್‌ಕುಮಾರ್ ಚ.ಮನೋಲಿ, ವಾಣಿಜ್ಯ ತೆರಿಗೆಗಳ ಆಯುಕ್ತರು, ಕರ್ನಾಟಕ, ಬೆಂಗಳೂರು ಆದ ನಾನು, ತಕ್ಷಣದಿಂದ ಜಾರಿಗೆ ಬರುವಂತೆ ಆದೇಶ ಹೊರಡಿಸಿರುತ್ತೇನೆ.

ಪಿ.ಆರ್. 414 ವಾಣಿಜ್ಯ ತೆರಿಗೆಗಳ ಆಯುಕ್ತರು, ಕರ್ನಾಟಕ, ಬೆಂಗಳೂರು.

**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ-ವಿಭಾಗ-4, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಐ.ಟಿ.ಐ ಆವರಣ, ಬೆಂಗಳೂರು-29.**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ-1/2004 ದಿನಾಂಕ: 9ನೇ ಮಾರ್ಚ್ 2004**

| **ಅರ್ಜಿದಾರರು:** | **ವಿರುದ್ಧ** | **ಪ್ರತಿವಾದಿಗಳು:** |
|---|---|---|
| ಶ್ರೀ ನಾಗರಾಜ ಯಮುನಪ್ಪ | | ಮೆ: ಶ್ರೀರಾಜರಾಜೇಶ್ವರಿ ಇಂಡಸ್ಟ್ರೀಸ್ ಲಿ. |
| ಕಥನಹಳ್ಳಿ ಮತ್ತು ಇತರೇ 3 ಜನರು ಜಾವಗೆರೆ, | | ಬಿಲ್ಲಿಕೆಂಪನಹಳ್ಳಿ ಎಂ. ಎನ್. ಹಳ್ಳಿ ಪೋಸ್ಟ್ ಬಿಡದಿ |
| ಗಾಂಧಿನಗರ ಮಸೀದಿ ಹತ್ತಿರ, ಗದಗ ಟೌನ್ | | ಬೆಂಗಳೂರು ಜಿಲ್ಲೆ. |

ಅರ್ಜಿದಾರರಾದ ಶ್ರೀ ನಾಗರಾಜ ಯಮುನಪ್ಪ ಕಥನಹಳ್ಳಿ ಇವರುಗಳು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ, ದಿವಂಗತ ಯಮುನಪ್ಪ ಇವರು ಪ್ರತಿವಾದಿ-ಇವರ ಬಳಿ ಕೆಲಸ ನಿರ್ವಹಿಸುತ್ತಿದ್ದಾಗ ಅಪಘಾತ ಹೊಂದಿ ಮೃತಪಟ್ಟಿರುತ್ತಾರೆಂದು ತಿಳಿಸಿರುತ್ತಾರೆ. ಅಲ್ಲದೆ ತಾವು ಮೃತರ ಅವಲಂಬಿತರಾದ್ದರಿಂದ ತಮಗೆ ಕಾಯ್ದೆಯನ್ವಯ ಪರಿಹಾರದ ಹಣವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನದೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

ಪಿ.ಆರ್. 416 ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಬೆಂಗಳೂರು ಉಪ-ವಿಭಾಗ-4, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಜಂಟಿ ನಿಬಂಧಕರ ನ್ಯಾಯಾಲಯ,**

**ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು-560 018**

**ದಾವಾಅರ್ಜಿ ಸಂಖ್ಯೆ: ಜೆಆರ್‌ಬಿ:ಡಿಎಸ್:9548:2003-04**

**ಅರ್ಜಿದಾರರು :** ಪ್ರಧಾನ ವ್ಯವಸ್ಥಾಪಕರು ಸರ್.ಎಂ. ವಿಶ್ವೇಶ್ವರಯ್ಯ ಕೋ- ಆಪರೇಟಿವ್ ಬ್ಯಾಂಕ್ ನಿಯಮಿತ, ನಂ.109, ಶಂಕರಮಠ ರಸ್ತೆ, ಶಂಕರಪುರಂ, ಬೆಂಗಳೂರು-560 004.

**ವಿರುದ್ಧ**

**ಪ್ರತಿವಾದಿಗಳು :**
1. ಶ್ರೀ ಜೆ.ಹೆಚ್. ಪ್ರಸನ್ನಕುಮಾರ್ ಮಾಲೀಕರು, ಮೆ: ಒಮೇಗಾ ಬಯೋಟೆಕ್, ನಂ.56, 3ನೇ ಕ್ರಾಸ್, ಕುಮಾರ್ ಲೇಔಟ್, ತಲಗಟ್ಟಪುರ, ಕನಕಪುರ ರಸ್ತೆ, ಬೆಂಗಳೂರು-560 062. ವಾಸ: ನಂ.265, 3ನೇ ಕ್ರಾಸ್, ಅವಲಹಳ್ಳಿ, ಬಿಡಿಎ ಲೇಔಟ್, ಗಿರಿನಗರ, ಬೆಂಗಳೂರು-85
2. ಶ್ರೀ ಡಿ. ಪದ್ಮನಾಭರಾವ್ ನಂ. 246-ಸಿ-3, 13ನೇ ಮುಖ್ಯರಸ್ತೆ, ಬನಶಂಕರಿ 1ನೇ ಹಂತ, ಬೆಂಗಳೂರು-50.
3. ಶ್ರೀಮತಿ ಕವಿತ ಕೋಂ. ಜೆ.ಹೆಚ್. ಪ್ರಸನ್ನಕುಮಾರ್ ನಂ. 265, 3ನೇ ಕ್ರಾಸ್, ಅವಲಹಳ್ಳಿ, ಬಿಡಿಎ ಎಕ್ಸ್‌ಟೆನ್ಷನ್ ಗಿರಿನಗರ, ಬೆಂಗಳೂರು-50.

**1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರ ರೀತ್ಯಾ ಚರ ಮತ್ತು ಸ್ಥಿರಾಸ್ತಿಯನ್ನು ಅಟ್ಯಾಚ್ ಮಾಡಿರುವ ಬಗ್ಗೆ ನೋಟೀಸು**

ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70ರನ್ವಯ ಈ ನ್ಯಾಯಾಲಯದ ಮುಂದೆ ಸಲ್ಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಗಳಿಂದ ಒಟ್ಟು ರೂ. 42,87,349/- ಗಳನ್ನು ದಿನಾಂಕ: 30.06.2002 ರಿಂದ ಶೇಕಡಾ 19 ರಂತೆ ಬಡ್ಡಿ ಮತ್ತು ಶೇ. 2 ರಂತೆ ಸುಸ್ತಿ ಬಡ್ಡಿಯೊಂದಿಗೆ ವಸೂಲಿ ಮಾಡಲು ಆದೇಶ ನೀಡಬೇಕೆಂದು ಈ ನ್ಯಾಯಾಲಯವನ್ನು ಕೋರಿರುತ್ತಾರೆ. ವಾದಿಯ ಈ ದಾವಾ ಅರ್ಜಿಯನ್ನು ದಾವಾ ನಂ. ಜೆಆರ್‌ಬಿ/ಡಿಸ್/9548/2003-04 ರನ್ವಯ ಈ ನ್ಯಾಯಾಲಯದ ಕಡತದ ಮೇಲೆ ತೆಗೆದುಕೊಳ್ಳಲಾಗಿದೆ.

ವಾದಿಯು ಅವರ ಈ ದಾವಾ ಅರ್ಜಿಯ ಜೊತೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರನ್ವಯ ಸಲ್ಲಿಸಿರುವ ಅರ್ಜಿಯಲ್ಲಿ ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment before Judgement) ಆದೇಶ ನೀಡುವಂತೆ ಈ ನ್ಯಾಯಾಲಯವನ್ನು ಕೋರಿರುತ್ತಾರೆ. ಪ್ರತಿವಾದಿಗಳು ಅವರ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಮಾರಾಟ ಮಾಡಲು/ ಪರಭಾರೆ ಮಾಡಲು ಉದ್ದೇಶಿಸಿದ್ದು ಇದನ್ನು ತಡೆಯದೇ ಇದ್ದಲ್ಲಿ, ವಾದಿಯು ಪ್ರತಿವಾದಿಗಳ ವಿರುದ್ಧ ಹೂಡಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್/ ಡಿಕ್ರಿ ನೀಡಿದ್ದರೂ ಸದರಿ ಅವಾರ್ಡ್/ಡಿಕ್ರಿಯನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ಅವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

ವಾದಿಯ ದಾವಾ ಅರ್ಜಿ ಮತ್ತು ಕಲಂ 103ರ ರೀತ್ಯಾ ಸಲ್ಲಿಸಿರುವ ಅರ್ಜಿಯನ್ನು ಕೂಲಂಕುಶವಾಗಿ ಪರಿಶೀಲಿಸಲಾಗಿ ವಾದಿಯು ಕಲಂ 103ರ ಅರ್ಜಿಯ ಜೊತೆ ತಿಳಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಅಲ್ಲದೇ ಪ್ರತಿವಾದಿಗಳು ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡದಂತೆ: ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ, ವಾದಿಯ ಈ ದಾವಾ ಅರ್ಜಿಯಲ್ಲಿ ನೀಡಲಿರುವ ಅವಾರ್ಡ್: ಡಿಕ್ರಿಯನ್ನು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣ ಮನವರಿಕೆಯಾಗಿರುತ್ತದೆ.

ಮೇಲಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹಾಗೂ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ:ಸಿಎಂಡಬ್ಲ್ಯೂ:69:ಸಿಎಲ್‌ಎಸ್:2001 ದಿನಾಂಕ: 21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು, ಪ್ರತಿವಾದಿಗಳ ಹೆಸರಿನಲ್ಲಿರುವ ಈ ಕೆಳಗೆ ಷೆಡ್ಯೂಲ್‌ನಲ್ಲಿ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಗಳು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಈ ನ್ಯಾಯಾಲಯವು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ರೂ. 42,87,349/- ಗಳನ್ನು ವಾದಿ ಬ್ಯಾಂಕಿನಲ್ಲಿ ಅಮಾನತ್ ಖಾತೆಗೆ ದಿನಾಂಕ: 22.03.2004ರ ಒಳಗಾಗಿ ಜಮಾ ಮಾಡಿ ಅಧಿಕೃತ ಚಲನ್/ ರಶೀತಿಯನ್ನು ಈ ನ್ಯಾಯಾಲಯಕ್ಕೆ ಹಾಜರುಪಡಿಸುವಂತೆ ಪ್ರತಿವಾದಿಗಳಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಗಳು ಮೇಲೆ ತಿಳಿಸಿದಂತೆ ನಿಗದಿತ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ಅಟ್ಯಾಚ್‌ಮೆಂಟ್ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗೆ ಕಾಣಿಸಿರುವ ಚರ ಮತ್ತು ಸ್ಥಿರಾಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಕ್ಕೆ ಈ ಅಟ್ಯಾಚ್‌ಮೆಂಟ್ ಆದೇಶವು ಒಳಪಡುತ್ತದೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಷೆಡ್ಯೂಲ್ ಆಸ್ತಿಯ ವಿವರ**

**ಷೆಡ್ಯೂಲ್-ಎ**

1ನೇ ಪ್ರತಿವಾದಿಯ ಹೆಸರಿನಲ್ಲಿರುವ ಬೆಂಗಳೂರು ನಗರ (ಬೆಂಗಳೂರು-560050) ಬನಶಂಕರಿ 1ನೇ ಹಂತದ, 13ನೇ ಮುಖ್ಯರಸ್ತೆ, 2ನೇ ಬ್ಲಾಕ್‌ನಲ್ಲಿರುವ ಪೂರ್ವದಿಂದ ಪಶ್ಚಿಮಕ್ಕೆ 49 ಅಡಿ 6 ಇಂಚು, ಉತ್ತರದಿಂದ ದಕ್ಷಿಣಕ್ಕೆ 30 ಅಡಿ ಅಳತೆಯ ನಿವೇಶನ ಸಂಖ್ಯೆ: 246/3 ಮತ್ತು ಇದರಲ್ಲಿ ಕಟ್ಟಿರುವ ಕಟ್ಟಡ ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ ಚಕ್ಕುಬಂದಿ:

ಪೂರ್ವಕ್ಕೆ : ನಿವೇಶನ ಸಂಖ್ಯೆ 281
ಪಶ್ಚಿಮಕ್ಕೆ : ರಸ್ತೆ
ಉತ್ತರಕ್ಕೆ : ನಿವೇಶನ ಸಂಖ್ಯೆ 246/ಬಿ
ದಕ್ಷಿಣಕ್ಕೆ : ನಿವೇಶನ ಸಂಖ್ಯೆ 247

**ಷೆಡ್ಯೂಲ್-ಬಿ**

1ನೇ ಪ್ರತಿವಾದಿಯ ಹೆಸರಿನಲ್ಲಿರುವ ಬೆಂಗಳೂರು ಉತ್ತರ ತಾಲ್ಲೂಕು, ಉತ್ತರಹಳ್ಳಿ ಹೋಬಳಿಯ ತಲಘಟ್ಟಪುರದಲ್ಲಿರುವ ಖಾತಾ ಸಂಖ್ಯೆ: 523 ಈ ಸಂಖ್ಯೆಯ 70 ಅಡಿ x 40 ಅಡಿ ಅಳತೆಯ (ಒಟ್ಟು 280 ಚದರ ಅಡಿ) ನಿವೇಶನ ಸಂಖ್ಯೆ 56 ಮತ್ತು ಇದರಲ್ಲಿ ಕಟ್ಟಿರುವ ಕಟ್ಟಡ, ವ್ಯಾಪಾರ ಮಳಿಗೆ ಇತ್ಯಾದಿ ಸೇರಿದಂತೆ ಚಕ್ಕುಬಂದಿ:

ಪೂರ್ವಕ್ಕೆ : ಖಾಸಗಿ ಸ್ವತ್ತು
ಪಶ್ಚಿಮಕ್ಕೆ : ರಸ್ತೆ
ಉತ್ತರಕ್ಕೆ : ನಿವೇಶನ ಸಂಖ್ಯೆ 55
ದಕ್ಷಿಣಕ್ಕೆ : ನಿವೇಶನ ಸಂಖ್ಯೆ 57

**ಷೆಡ್ಯೂಲ್-ಸಿ**

1ನೇ ಪ್ರತಿವಾದಿಯ ಹೆಸರಿನಲ್ಲಿರುವ ಚಿತ್ರದುರ್ಗ ನಗರ, ಜಯಚಾಮರಾಜೇಂದ್ರ ನಗರದ 5ನೇ ಬ್ಲಾಕ್, 6ನೇ ಅಡ್ಡರಸ್ತೆಯಲ್ಲಿರುವ ಮುನಿಸಿಪಾಲ್ ಖಾತೆ ಸಂಖ್ಯೆ:2993/2842, ಅಸೆಸ್‌ಮೆಂಟ್ ನಂ. 9670:8163, ಪೂರ್ವದಿಂದ ಪಶ್ಚಿಮಕ್ಕೆ 22.5 ಅಡಿ, ಉತ್ತರದಿಂದ ದಕ್ಷಿಣಕ್ಕೆ 60 ಅಡಿ ಅಳತೆಯ ನಿವೇಶನ ಸಂಖ್ಯೆ: 220 ಮತ್ತು ಇದರಲ್ಲಿ ಕಟ್ಟಿರುವ ಆರ್.ಸಿ.ಸಿ. ಕಟ್ಟಡ ಇತ್ಯಾದಿ ಸೇರಿದಂತೆ ಚಕ್ಕುಬಂದಿ:

ಪೂರ್ವಕ್ಕೆ : ಚಂದ್ರಶೇಖರ್ ಭಟ್‌ರವರ ನಿವೇಶನ ಸಂಖ್ಯೆ 219
ಪಶ್ಚಿಮಕ್ಕೆ : ಮಲ್ಲಿಕಾರ್ಜುನಯ್ಯನವರಿಗೆ ಸೇರಿದ ನಿವೇಶನ ಸಂಖ್ಯೆ 221
ಉತ್ತರಕ್ಕೆ : ರಸ್ತೆ
ದಕ್ಷಿಣಕ್ಕೆ : ಕನ್ಸರ್‌ವೆನ್ಸಿ

**ಷೆಡ್ಯೂಲ್-ಡಿ (ಚರಾಸ್ತಿಗಳು)**

| ಕ್ರಮ ಸಂಖ್ಯೆ | ಮೆಷಿನರಿ ವಿವರ | ಸರಬರಾಜುದಾರರ ಹೆಸರು | ಸಂಖ್ಯೆ |
|---|---|---|---|
| 1. | ಇಂಪೋರ್ಟೆಡ್ ಮೈಕ್ರೋ ಪೈಪೆಟಿಸ್ | ಸ್ಯಾನ್ ಮೋದಿ ಸಿಸ್ಟಮ್ಸ್ | 6 |
| 2. | ಮೈಕ್ರೋ ಚಾನೆಲ್ ಮೈಕ್ರೋ ಪೈಪೆಟಿಸ್ | ಸ್ಯಾನ್ ಮೋದಿ ಸಿಸ್ಟಮ್ಸ್ | 2 |
| 3. | ಎಲೆಕ್ಟ್ರಾನಿಕ್ ಬ್ಯಾಲೆನ್ಸ್ | ಸ್ಯಾನ್ ಮೋದಿ ಸಿಸ್ಟಮ್ಸ್ | 1 |
| 4. | ಲ್ಯಾಮಿನರ್ ಏರ್ ಫ್ಲೋ ಯುನಿಟ್ | ಕಿರ್ಲೋಸ್ಕರ್ ಎಲೆಕ್ಟ್ರಾಗ್ರೋ ಡೈನೆ | 1 |
| 5. | ಎಲಿಸಾ ರೀಡರ್ | ಸ್ಯಾನ್ ಮೆಡಿ ಸಿಸ್ಟಮ್ಸ್ | 1 |
| 6. | ಎಲಿಸಾ ವಾಷರ್ | ಸ್ಯಾನ್ ಮೆಡಿ ಸಿಸ್ಟಮ್ಸ್ | 1 |
| 7. | ಯು.ವಿ.ವಿಸಿಬಲ್ ಡಿಜಿಟಲ್ ಸ್ಪೆಕ್ಟ್ರಾ ಮೀಟರ್ | ಸಿಸ್ಟ್ರಾನಿಕ್ಸ್ | 1 |
| 8. | ಪಿ.ಹೆಚ್. ಮೀಟರ್ ವಿತ್ ಎಕ್ಸೆಸರೀಸ್ | ಸಿಸ್ಟ್ರಾನಿಕ್ಸ್ | 1 |
| 9. | ಜನರಲ್ ಪರ್ಪಸ್ ಲ್ಯಾಬ್ ಸೆಂಟ್ರಿಫ್ಯೂಜ್ | ರೆಮಿ ಸಲೇಸಮ್ ಅಂಡ್ ಇಂಜಿನಿಯರ್ಸ್ ಲಿಮಿಟೆಡ್ | 1 |
| 10. | ಇನ್‌ಕ್ಯುಬೇಟರ್ | ಸಿಗ್ಮ ಇಂಡಸ್ಟ್ರೀಸ್ ಅಂಡ್ ಲ್ಯಾಬ್ | 1 |
| 11. | ಡಬಲ್ ಡೆಸ್ಟಿಲೇಷನ್ ಯುನಿಟ್ | ಸಿಗ್ಮ ಇಂಡಸ್ಟ್ರೀಸ್ ಅಂಡ್ ಲ್ಯಾಬ್ | 1 |
| 12. | ಕೆ.ಎಸ್. 273 ವೆಸ್ಟ್ ಫ್ರಾಸ್ಟ್ ಟೈಪ್ ಡೀಪ್ ಫ್ರೀಜರ್ | ಸಿಗ್ಮ ಇಂಡಸ್ಟ್ರೀಸ್ ಅಂಡ್ ಲ್ಯಾಬ್ | 1 |
| 13. | ಬ್ಲೂಸ್ಟಾರ್ ಎ.ಸಿ.20 ಟಿಆರ್ ವಿಂಡೋ ಸ್ಟೆಬಿಲೈಸರ್ ಸೇರಿದಂತೆ | ಫ್ಲೈನ್ಸ್ ಸಿಸ್ಟಮ್ಸ್ ಬೆಂಗಳೂರು | 1 |

| ಕ್ರಮ ಸಂಖ್ಯೆ | ಮೆಷಿನರಿ ವಿವರ | ಸರಬರಾಜುದಾರರ ಹೆಸರು | ಸಂಖ್ಯೆ |
|---|---|---|---|
| 14. | ಕಂಪ್ಯೂಟರ್ ಪೆಂಟಿಯಮ್ ವಿತ್ ಆಲ್ ಎಕ್ಸೆಸರೀಸ್ | ಶ್ರೀ ಸಿಸ್ಟಮ್ಸ್ ಬೆಂಗಳೂರು | 1 |
| 15. | ಪ್ರಿಂಟರ್ ಟಿವಿಎಸ್‌ಇ ಮೇಕ್ | ಶ್ರೀ ಸಿಸ್ಟಮ್ಸ್ ಬೆಂಗಳೂರು | 1 |
| 16. | ಲ್ಯಾಬ್ ಟೇಬಲ್ಸ್ | ಗ್ನಾನೇಶ್ವರ ವುಡ್ ಇಂಡಸ್ಟ್ರೀಸ್ | 1 |
| 17. | ಲ್ಯಾಬ್ ಈಕ್ವಿಪ್‌ಮೆಂಟ್ಸ್ | ಗ್ನಾನೇಶ್ವರ ವುಡ್ ಇಂಡಸ್ಟ್ರೀಸ್ | 1ಸೆಟ್ |
| 18. | ವ್ಯಾಕ್ಯೂಮ್ ಸೀಲರ್ | ಪ್ರಾವಿಡೆನ್ಸ್ ಕಾರ್ಪೊರೇಷನ್ ಬೆಂಗಳೂರು | 1 |
| 19. | ಡಿ.ಜಿ.ಸೆಟ್ ಕಿರ್ಲೋಸ್ಕರ್ ಮೇಕ್ | ಆಶೀರ್ವಾದ್ ಇಂಜೀನಿಯರಿಂಗ್ ಪ್ರೈಲಿ., | 1 |
| 20. | ಇಂಪೋರ್ಟೆಡ್ ಡಿಸ್ಪೆನ್ಸಿಂಗ್ ಮೆಷಿನ್ | ಸ್ಯಾನ್ ಮೆಂಡಿಸಿಸ್ಟಮ್ಸ್ | 1 |
| 21. | ಅಲ್ಯೂಮಿನಿಯಮ್ ಪಾರ್ಟಿಷನ್ಸ್ | ಸ್ವಾತಿ ಇಂಟೀರಿಯರ್ಸ್ | 1 |

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿ ಮುದ್ರೆಯೊಂದಿಗೆ ಈ ದಿನ ಅಂದರೆ ದಿನಾಂಕ: 25.02.2004 ರಂದು ನೀಡಿರುತ್ತೇನೆ.

ಬಸವೇಗೌಡ

ಪಿ.ಆರ್. 415 ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.**

**ಅಧಿಬಾರ ಅರ್ಜಿ ನಂ.2:03-04**

**ಅರ್ಜಿದಾರರು:** ವಿರುದ್ಧ **ಪ್ರತಿವಾದಿಗಳು:**

ವ್ಯವಸ್ಥಾಪಕರು, ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ)., ಸಿಂಗನಮನೆ, ಭದ್ರಾವತಿ ತಾಲ್ಲೂಕು.

ಎಸ್. ಬಸವರಾಜ್ (ಮೌತಿ), ಮಾಜಿ ವ್ಯವಸ್ಥಾಪಕರು, ವಿಎಸ್‌ಎನ್‌ಬಿಎನ್, ಸಿಂಗನಮನೆ.

ಮೌತಿ ವಾರಸುದಾರರು:

1. ಶ್ರೀಮತಿ ಶಾರದಮ್ಮ, ಕೋಂ ಲೇಟ್ ಎಸ್. ಬಸವರಾಜ್, ಸಿಂಗನಮನೆ, ಭದ್ರಾವತಿ ತಾ:
2. ಕುಮಾರ್ ಬಿ., ಬಿನ್ ಲೇಟ್ ಎಸ್. ಬಸವರಾಜ್, ಸಿಂಗನಮನೆ, ಭದ್ರಾವತಿ ತಾ:

**(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತು ಆಜ್ಞೆ)**

**ಪ್ರಸ್ತಾವನೆ:**

ಅರ್ಜಿದಾರ ಬ್ಯಾಂಕ್ ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ ಬ್ಯಾಂಕಿನ 2000-01 ಮತ್ತು 2001-02ನೇ ಸಾಲಿನ ಲೆಕ್ಕಪರಿಶೋಧನೆಯ ರೀತ್ಯಾ ದುರುಪಯೋಗವಾಗಿದೆಯೆಂಬ ಆಪಾದನೆಗೆ ಒಳಗಾದ ಶ್ರೀ ಎಸ್. ಬಸವರಾಜ್, ಎದುರು ಅರ್ಜಿದಾರರಿಂದ ಒಟ್ಟು ರೂ. 1011804-35 ಗಳ ಮೊತ್ತದ ಹಣದ ವಸೂಲಿ ಕ್ರಮಕ್ಕಾಗಿ ಅಧಿಭಾರ ಅರ್ಜಿ ಹೂಡಿ ಈ ಸಂಬಂಧವಾಗಿ ಪ್ರಮಾಣ ಪತ್ರವನ್ನು ಸಲ್ಲಿಸಿ, ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತು ಆದೇಶಕ್ಕೆ ಒಳಪಡಿಸಲು ಎದುರು ಅರ್ಜಿದಾರರುಗಳ ಆಸ್ತಿಯನ್ನು ಮೇಲ್ಕಂಡ ನ್ಯಾಯಾಲಯದಲ್ಲಿ ಸಲ್ಲಿಸಿದ್ದು, ಅದರಂತೆ ಎದುರು ಅರ್ಜಿದಾರರು ಮೌತಿಯಾಗಿರುವುದರಿಂದ ಅವರ ವಾರಸುದಾರರಾದ ಶ್ರೀಮತಿ ಶಾರದಮ್ಮ, ಕೋಂ ಲೇಟ್ ಎಸ್. ಬಸವರಾಜ್ ಮತ್ತು ಕುಮಾರ್ ಬಿ. ಬಿನ್ ಲೇಟ್ ಎಸ್. ಬಸವರಾಜ್, ಸಿಂಗನಮನೆ, ಭದ್ರಾವತಿ ತಾಲ್ಲೂಕು ಇವರಿಗೆ ಸಹಕಾರ ಸಂಘಗಳ ಕಾಯ್ದೆ ಕಲಂ 103ರನ್ವಯ ಷರತ್ತು ಪೂರ್ವಕ ಜಪ್ತು ಆಜ್ಞೆಯ ನೋಟೀಸನ್ನು ದಿನಾಂಕ: 5.2.2004 ರಂದು ಈ ನ್ಯಾಯಾಲಯ ಹೊರಡಿಸಿ, ಸದರೀ ಆಜ್ಞೆಯ ನೋಟೀಸ್ ಪ್ರತಿಯನ್ನು ಈ ಕಛೇರಿಯ ಜಾರಿಗಾರರ ಮುಖಾಂತರ ಖುದ್ದು ಜಾರಿ ಮಾಡಿಸಲಾಗಿದೆ. ಆಜ್ಞೆಯ ಪ್ರತಿಯನ್ನು ಎದುರಿಗಳು ಪಡೆದು, ಅದರಲ್ಲಿನ ಷರತ್ತುಗಳನ್ನು ಪೂರೈಸಲು ವಿಫಲರಾಗಿರುವುದರಿಂದ ದಿನಾಂಕ: 5.2.2004 ರಂದು ಹೊರಡಿಸಿದ ಷರತ್ತು ಪೂರ್ವ ಜಪ್ತು ಆಜ್ಞೆಯನ್ನು ಸ್ಥಿರೀಕರಣಗೊಳಿಸಿ (ಖಾಯಂಗೊಳಿಸಿ) ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಕ್ರಮಾಂಕ:ಸನಿ:34:ಎಬಿಎನ್: ಎಬಿಜೆ:03-04 ದಿನಾಂಕ: 3ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಎ.ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಎದುರು ಅರ್ಜಿದಾರರು ಇವರಿಗೆ ಸೇರಿದ ಈ ಕೆಳಕಂಡ "ಅನುಸೂಚಿ" ಯಲ್ಲಿ ತೋರಿಸಿದ ಸ್ಥಿರಾಸ್ತಿಗಳನ್ನು ಮೇಲ್ಕಂಡ ಅಧಿಭಾರದ ಅರ್ಜಿಯ ತೀರ್ಪನ್ನು ಕಾಯ್ದಿರಿಸಿ, ದಿನಾಂಕ: 5.2.2004ರ ಷರತ್ತು ಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಿ ಆದೇಶಿಸಿದೆ.

ಈ ಆದೇಶಕ್ಕೆ ಅನುಸೂಚಿಯಲ್ಲಿರುವ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ್ಕೆ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

**ಜಪ್ತು ಆದೇಶಕ್ಕೆ ಒಳಗಾದ ಸ್ವತ್ತಿನ ಅನುಸೂಚಿ**

| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ: ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1. | ಎಸ್. ಬಸವರಾಜ್, ಬಿನ್ ನಿಂಗಯ್ಯ | ಸಿಂಗನಮನೆ, ಭದ್ರಾವತಿ ತಾ: | ಖಾತೆ ನಂ. 153 ಎಂಆರ್ 9:91-92 ಸರ್ವೆ ನಂ. 16 | 0.27 ಗುಂಟೆ | ಜಮೀನು |
| 2. | ಶ್ರೀಮತಿ ಶಾರದಮ್ಮ ಕೋಂ ಲೇಟ್ ಎಸ್. ಬಸವರಾಜ್ | " " | ಖಾತೆ ನಂ. 94 | 50 x 30 ಅಡಿಗಳು | ಆರ್‌ಸಿಸಿ ಮನೆ |

**ಚಕ್ಕುಬಂದಿ:**

ಪೂರ್ವ:ಸರ್ವೆ ನಂ.93, ಪಶ್ಚಿಮ: ಸರ್ವೆನಂ. 95, ಉತ್ತರ:ರಸ್ತೆ, ದಕ್ಷಿಣ:ರಸ್ತೆ.

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ಈ ದಿನ ದಿನಾಂಕ: 3.3.2004 ರಂದು ಹೊರಡಿಸಿದೆ.

ಪಿ.ಆರ್. 417 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.**

**ಅಧಿಬಾರ ಅರ್ಜಿ ನಂ. :03-04**

**ಅರ್ಜಿದಾರರು:** ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ (ನಿ), ಆಯನೂರು, ಶಿವಮೊಗ್ಗ ತಾಲ್ಲೂಕು, ಇದರ ಪರವಾಗಿ ವ್ಯವಸ್ಥಾಪಕರು.

**ವಿರುದ್ಧ**

**ಪ್ರತಿವಾದಿಗಳು:**

ಶ್ರೀ ನಿರಂಜನಮೂರ್ತಿ (ಪೌತಿ), ಮಾಜಿ ಕಾರ್ಯದರ್ಶಿ, ವಿಎಸ್‌ಎಸ್ ಬಿಎನ್, ಆಯುನೂರು, ಶಿವಮೊಗ್ಗ ತಾ:

ಇವರ ವಾರಸುದಾರರು:

1. ಶ್ರೀಮತಿ ಮಧು, ಕೋಂ ಲೇಟ್ ನಿರಂಜನಮೂರ್ತಿ ಹಾರ್‍ನಹಳ್ಳಿ ಅಂಚೆ, ಶಿವಮೊಗ್ಗ ತಾ:
2. ಪ್ರದೀಪ್ ಬಿನ್ ನಿರಂಜನಮೂರ್ತಿ ಹಾರ್‍ನಹಳ್ಳಿ ಅಂಚೆ, ಶಿವಮೊಗ್ಗ ತಾ:
3. ರಜನೀಶ್, ಬಿನ್ ನಿರಂಜನಮೂರ್ತಿ, ಹಾರ್‍ನಹಳ್ಳಿ ಅಂಚೆ, ಶಿವಮೊಗ್ಗ ತಾ:

**(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತು ಆಜ್ಞೆ)**

**ಪ್ರಸ್ತಾವನೆ:**

ಅರ್ಜಿದಾರ ಬ್ಯಾಂಕ್ ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ 2001-2002ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಂತೆ ರೂ. 663790-65 ಗಳ ದುರುಪಯೋಗದ ವಸೂಲಿ ಬಗ್ಗೆ ಎದುರಿಗಳ ಮೇಲೆ ಅಧಿಭಾರ ಅರ್ಜಿಯನ್ನು ದಾಖಲು ಮಾಡಿದ್ದು, ಈ ಸಂಬಂಧವಾಗಿ ದಿನಾಂಕ: 20.2.2004 ರಂದು ಅರ್ಜಿದಾರರು ನೀಡಿದ ಕಲಂ 103ರ ಅರ್ಜಿಯಲ್ಲಿ ಅರ್ಜಿದಾರ ಬ್ಯಾಂಕ್ ಎದುರು ಅರ್ಜಿದಾರರ ವಿರುದ್ಧ ನಗದು, ದಾಸ್ತಾನು ದುರುಪಯೋಗದ ಬಾಬ್ತು ವಸೂಲಿಗಾಗಿ ಕಾಯ್ದೆ ಕಲಂ 69ರ ಅಡಿಯಲ್ಲಿ ಅರ್ಜಿದಾರರ ಬ್ಯಾಂಕಿನ ಪರವಾಗಿ ಡಿಕ್ರಿ ಕೋರಿ ಪ್ರಕರಣ ದಾಖಲಿಸಿದ್ದು, ಶ್ರೀ ನಿರಂಜನಮೂರ್ತಿ (ಪೌತಿ) ಇವರ ಹೆಸರಿನಲ್ಲಿರುವ ಸ್ಥಿರ ಸ್ವತ್ತನ್ನು ವಾರಸುದಾರರುಗಳು ಪರಭಾರೆ: ಮಾರಾಟ ಮಾಡಲು ತಯಾರಿ ನಡೆಸುತ್ತಿರುವುದಾಗಿ ತಿಳಿದು ಬಂದಿದೆ. ಹಾಗೇನಾದರೂ ಎದುರು ಅರ್ಜಿದಾರರುಗಳು ಸ್ಥಿರ ಸ್ವತ್ತನ್ನು ಮಾರಾಟ: ಪರಭಾರೆ ಮಾಡಿದ್ದೆ ಆದಲ್ಲಿ ದುರುಪಯೋಗದ ಹಣ ವಸೂಲಾತಿ ಆಗದೇ ಇರುವಂತಹ ಪರಿಸ್ಥಿತಿ ಇರುವ ಪ್ರಯುಕ್ತ ಅರ್ಜಿದಾರ ಬ್ಯಾಂಕ್ ಘನ ನ್ಯಾಯಾಲಯದಲ್ಲಿ ಎದುರು ಅರ್ಜಿದಾರರ ಹೆಸರಿನಲ್ಲಿರುವ ಆಸ್ತಿಯನ್ನು ಆದೇಶಕ್ಕಿಂತ ಪೂರ್ವದಲ್ಲಿ ಸಹಕಾರ ಸಂಘಗಳ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಕ್ರಮವನ್ನು ಈ ದಾವೆಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಭಾರೆ ಮಾಡುವ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಬೇಕೆಂದು ಕೋರಿದ್ದಾರೆ. ಈ ಕೋರಿಕೆ ಯುಕ್ತವಾಗಿದೆಯೆಂದು ಸ್ವತಃ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದ್ದು, ಈ ಕೆಳಕಂಡ ಷರತ್ತು ಪೂರ್ವ ಜಪ್ತು ಆಜ್ಞೆಯ ನೋಟೀಸನ್ನು ಹೊರಡಿಸಲಾಗಿದೆ.

**ಆದೇಶ**

**ಕ್ರ.ಸಂ. ಸನಿಶಿ 24:ಎಬಿಎನ್: ಕಲಂ 103:03-04 1830: ದಿನಾಂಕ: 3ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಎ.ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿ (ಷೆಡ್ಯೂಲ್) ಯಲ್ಲಿ ಕಾಣಿಸಿರುವ ಸ್ಥಿರಾಸ್ತಿಗಳನ್ನು ಅಧಿಭಾರ ಅರ್ಜಿಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವಕ ಜಪ್ತುಗೊಳಿಸಲಾಗಿದೆಯೆಂದು ಆದೇಶಿಸಿದೆ.

ಅಲ್ಲದೇ ಎದುರು ಅರ್ಜಿದಾರರುಗಳು ತಮ್ಮ ಸ್ಥಿರಾಸ್ತಿಯನ್ನು ಷರತ್ತು ಪೂರ್ವ ಜಪ್ತು ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆ (ಸೆಕ್ಯೂರಿಟಿ)ಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಇವರ ಹೆಸರಿನಲ್ಲಿ ಶಿವಮೊಗ್ಗ ಜಿಲ್ಲಾ ಸಹಕಾರ

ಕೇಂದ್ರ ಬ್ಯಾಂಕ್ (ನಿ), ಶಿವಮೊಗ್ಗ ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ, ಈ ಬಗ್ಗೆ ರಶೀದಿ ಅಥವಾ ಬ್ಯಾಂಕಿನ ಚಲನ್ನಿನ ಪತ್ರಿಯನ್ನು ದಿನಾಂಕ: 25.3.2004ರ ಒಳಗೆ ಕೆಳಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತು ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತು ಪೂರ್ವಕ್ಕೆ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಆದೇಶಕ್ಕೆ ಅನುಸೂಚಿಯಲ್ಲಿರುವ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

ಷರತ್ತು ಪೂರ್ವಕ ಜಪ್ತು ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ

**ಷೆಡ್ಯೂಲ್**

| ಕ್ರಮ ಸಂಖ್ಯೆ | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ: ಸರ್ವೆ ನಂ. | ವಿಸ್ತೀರ್ಣ | ತರಹೆ |
|---|---|---|---|---|---|
| 1. | ಶ್ರೀ ನಿರಂಜನಮೂರ್ತಿ, ಬಿನ್ ರಂಗಪ್ಪ | ಹಿಟ್ಟೂರು ಗ್ರಾಮ ಹಾರ್ನಹಳ್ಳಿ ಹೋಬಳಿ ಶಿವಮೊಗ್ಗ ತಾ: | ಖಾತೆ ನಂ. 87 ಎಂಆರ್ 23:98-99 | 9.18 | ತರಿ |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ದಿನಾಂಕ: 3.3.2004 ರಂದು ನೀಡಿದೆ.

ಪಿ.ಆರ್. 418 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು

**ವಿಷಯ :** ಶ್ರೀಮತಿ ಶರೀಫ್ ಡಿ. ಇಂಗಳಗಿ, 'ಡಿ' ವರ್ಗನೌಕರ, ಪ್ರಾ. ಆ. ಕೇಂದ್ರ, ಮೊರಬ.

**ಓದಲಾಗಿದೆ :**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂ:ಡಿಪಿಎನ್(13)ಸಿಆರ್-31: 98-99
2. ನೌಕರರ ಲಿಖಿತ ಅಹವಾಲು ಪತ್ರ
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂ:ಡಿಪಿಎನ್ (13) ಸಿಆರ್-31: 98-99, ದಿನಾಂಕ: 16.9.02
4. ವಿಚಾರಣಾ ವರದಿಯ ಸಂ:ವಿಅ:ವಿಚಾರಣೆ: ಮುಜಾಅ: ಜಾಕೋ:ಎನ್‌ಜಿ:72: 2002-03, ದಿನಾಂಕ: 23.7.03.
5. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂ: ಡಿಪಿಎನ್ (13) ಸಿಆರ್-31:98-99.
6. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ: 4.9.2003.

**ಪ್ರಸ್ತಾವನೆ:**

ಶ್ರೀ ಶರೀಫ್ ಡಿ. ಇಂಗಳಗಿ, ಡಿ-ವರ್ಗ ನೌಕರರು, ಇವರು ಈ ಹಿಂದೆ ಕಿಮ್ಸ್, ಹುಬ್ಬಳ್ಳಿ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಪದೇ ಪದೇ ಕೆಲಸದಿಂದ ಅನಧಿಕೃತ ಗೈರು ಆಗುತ್ತಿದ್ದುದರಿಂದ ಇದರ ಬಗ್ಗೆ ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು ನೌಕರರು ನಿಗದಿತ ಸಮಯದಲ್ಲಿ ಲಿಖಿತ ಹೇಳಿಕೆಯನ್ನು ನೀಡಿರುವುದಿಲ್ಲ. ಆದುದರಿಂದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿ, (ಜಾಗೃತಕೋಶ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ, ರೀತ್ಯಾ ಮೇಲೆ ಓದಲಾದ (4)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ, ಮೇಲೆ ಓದಲಾದ (5)ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (6)ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾರೆ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(13) ಸಿಆರ್-31: 98-99, ಬೆಂಗಳೂರು ದಿನಾಂಕ: 5ನೇ ಮಾರ್ಚ್ 2004**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ: ಜಿ. ಬಿ. ದೇಸಾಯಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀ ಶರೀಫ್ ಡಿ. ಇಂಗಳಗಿ, ಡಿ-ವರ್ಗ ನೌಕರರು, ಪ್ರಾಥಮಿಕ ಆರೋಗ್ಯ ಕೇಂದ್ರ, ಮೊರಬ, ನವಲಗುಂದ (ತಾ) ಧಾರವಾಡ ಜಿಲ್ಲೆ, ಇವರು ಪದೇ ಪದೇ ಕೆಲಸದಿಂದ ಅನಧಿಕೃತ ಗೈರುಹಾಜರಿ ಆಗುತ್ತಿದ್ದುದರಿಂದ ದಂಡನೆಯಾಗಿ ಸದರಿ ನಿಯಮ 8 (7)ರ ಪ್ರಕಾರ ಕೂಡಲೇ ಜಾರಿಗೆ ಬರುವಂತೆ ಕೆಲಸದಿಂದ ವಜಾ ಮಾಡಲು ಆದೇಶಿಸಿದ್ದೇನೆ.

**ಡಾ: ಜಿ. ಬಿ. ದೇಸಾಯಿ**

ಪಿ.ಆರ್. 419 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ :** ಶ್ರೀಮತಿ: ವಿ.ಪಿ. ನಾವಲಗಿ, ಕಿಮಆಸ. ಪ್ರಾಆಕೇ ಹಿರೇಕುಂಬಿ, ಸವದತ್ತಿ (ತಾ) ಬೆಂಗಳೂರು ಗ್ರಾ. ಜಿಲ್ಲೆ

**ಓದಲಾಗಿದೆ :**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರ ಸಂ:ಡಿಪಿಎನ್(12)ಸಿಆರ್-49:00-01 ದಿನಾಂಕ: 20.1.01.
2. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ: 2.4.2002.
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂ:ಡಿಪಿಎನ್ (12) ಸಿಆರ್-49:00-01, ದಿನಾಂಕ: 30.4.02
4. ವಿಚಾರಣಾ ವರದಿಯ ಸಂ:ವಿಅ:ವಿಚಾರಣೆ:ಎನ್‌ಬಿ:9: 2002-03, ದಿನಾಂಕ: 18.1.03.
5. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂ: ಡಿಪಿಎನ್ (12) ಸಿಆರ್-49:00-01, ದಿನಾಂಕ: 28.3.03.
6. ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ: 16.8.2003.

**ಪ್ರಸ್ತಾವನೆ:**

ಶ್ರೀಮತಿ: ವಿ. ಸಿ. ನಾವಲಗಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ ಹಿರೇಕುಂಟಿ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ: 20.10.97 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರು ಹಾಜರಿ, ಬಗ್ಗೆ ಮೇಲೆ ಓದಲಾದ (1)ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿ ಗೊಳಿಸಿದ್ದು ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2) ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸಿದಂತೆ ಪರಿಶೀಲಿಸಿ, ಅದು ಸಮರ್ಪಕವಾಗಿರದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3)ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು (ಜಾ.ಕೋ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (4)ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ, ಮೇಲೆ ಓದಲಾದ (5) ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (6)ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾರೆ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂ: ಡಿಪಿಎನ್ (12) ಸಿಆರ್ 49:00-01, ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2004**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಜಿ.ಬಿ. ದೇಸಾಯಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀಮತಿ: ನಾವಲಗಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಹಿರೀಕುಂಬಿ, ಸವದತ್ತಿ ತಾ: ಇವರು ದಿನಾಂಕ: 20.10.97 ರಿಂದ ಇಲ್ಲಿಯವರೆಗೆ ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಿ ಬಗ್ಗೆ ದಂಡನೆಯಾಗಿ ಸದರಿ ನಿಯಮ 8(8)ರ ಪ್ರಕಾರ ಸರ್ಕಾರಿ ಸೇವೆಯಿಂದ ವಜಾಗೊಳಿಸುವ ದಂಡನೆಯನ್ನು ವಿಧಿಸಿದ್ದೇನೆ.

**ಡಾ: ಜಿ. ಬಿ. ದೇಸಾಯಿ**

ಪಿ.ಆರ್. 420 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ :** ಶ್ರೀಮತಿ: ಡಿ. ಬಿ. ಕರಿಗಾರ, ಕಿ.ಮ ಆ ಸ, ಪ್ರಾಥಮಿಕ ಆರೋಗ್ಯ ಕೇಂದ್ರ, ಮೊರಬ, ಇವರ ಅನಧಿಕೃತ ಗೈರುಹಾಜರಿ ಬಗ್ಗೆ ಇಲಾಖೆ, ವಿಚಾರಣೆ ಅಂತಿಮ ಆದೇಶ.

**ಓದಲಾಗಿದೆ :**
1. ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರ ಸಂ:ಡಿಪಿಎನ್(13)ಸಿಆರ್-53:01-02, ದಿನಾಂಕ: 27.2.2002.
2. ನೌಕರರ ಲಿಖಿತ ಅಹವಾಲು ಪತ್ರ ಸಲ್ಲಿಸಿರುವುದಿಲ್ಲ.
3. ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂ:ಡಿಪಿಎನ್ (13) ಸಿಆರ್-53:01-02, ದಿನಾಂಕ: 12.12.03
4. ವಿಚಾರಣಾ ವರದಿಯ ಸಂ:ವಿಅ:ವಿಚಾರಣೆ:ಎನ್‌ಜಿ:186: 2002-03, ದಿನಾಂಕ: 30.9.2003.
5. ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂ: ಡಿಪಿಎನ್ (13) ಸಿಆರ್-53:01-02, ದಿನಾಂಕ: 28.10.03.
6. ನೌಕರರು ಲಿಖಿತ ಅಹವಾಲು ಸಲ್ಲಿಸಿರುವುದಿಲ್ಲ.

**ಪ್ರಸ್ತಾವನೆ:**

ಶ್ರೀಮತಿ: ಡಿ. ಬಿ. ಕರಿಗಾರ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಮೊರಬ, ಧಾರವಾಡ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ದಿನಾಂಕ: 1.7.94 ರಿಂದ ಅನಧಿಕೃತ ಗೈರುಹಾಜರಿ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2) ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುವುದಿಲ್ಲ. ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3) ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು, ಜಾಗೃತ ಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (4) ರಲ್ಲಿನ ಆದೇಶದಂತೆ, ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ ಮೇಲೆ ಓದಲಾದ (5)ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (6)ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುವುದಿಲ್ಲ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್:13:ಸಿಆರ್:53:01-02, ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2004**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಜಿ. ಬಿ. ದೇಸಾಯಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀಮತಿ ಡಿ. ಬಿ. ಕರಿಗಾರ, ಕಿಮಆಸ, ಪ್ರಾಥಮಿಕ ಆರೋಗ್ಯ ಕೇಂದ್ರ ಮೊರಬ, ಧಾರವಾಡ ಜಿಲ್ಲೆ ಇವರು ದಿನಾಂಕ: 1.7.94 ರಿಂದ ಇಲ್ಲಿಯವರೆಗೆ ಸೇವೆಗೆ ಅನಧಿಕೃತ ಗೈರುಹಾಜರಿ ಬಗ್ಗೆ ದಂಡನೆಯಾಗಿ ವರದಿ ನಿಯಮ 8(7)ರ ಪ್ರಕಾರ ದಿನಾಂಕ: 1.7.94 ರಿಂದ ಅನ್ವಯವಾಗುವಂತೆ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಿದ್ದೇನೆ.

**ಡಾ: ಜಿ. ಬಿ. ದೇಸಾಯಿ**

ಪಿ.ಆರ್. 421 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಗುಲಬರ್ಗಾ ಜಿಲ್ಲೆ, ಗುಲಬರ್ಗಾ ಇವರ ನ್ಯಾಯಾಲಯದ ನಡುವಳಿಗಳು**

**ಸಂಖ್ಯೆ: ಅಬಕ: ಅಪರಾಧ:102:2002-03 ದಿನಾಂಕ: 26ನೇ ಫೆಬ್ರವರಿ 2004**

| ಫಿರ್ಯಾದಿದಾರರು: | ವಿರುದ್ಧ | ಪ್ರತಿನಿಧಿಸುವವರು: |
|---|---|---|
| ಆರಕ್ಷಕ ನಿರೀಕ್ಷಕರು, ಆರಕ್ಷಕ ಠಾಣೆ ಆಳಂದ | | ಸಹಾಯಕ ಅಭಿಯೋಗ ನಿರ್ದೇಶಕರು, ಗುಲಬರ್ಗಾ |
| 1. ಶ್ರೀ ಅನಿಲ ತಂದೆ ಸಂಬಾಜಿ ಉಕಂಡೆ ಹಾಗೂ ಅವರ ಸಂಗಡ 16 ಜನರು ಸಾ: ಆಳಂದ | | ---- |
| 2. ಶ್ರೀ ಸಂತೋಷ ತಂದೆ ಸುಭಾಷ ಗುತ್ತೆದಾರ ಮಟಕಿ ರೋಡ ಆಯಾ ಜಿಂಗಲ ಆಳಂದ (ವಾಹನದ ಮಾಲಿಕರು) | | ---- |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ: 09.01.2003 ರಂದು ಆಳಂದ ಪಟ್ಟಣದ ಪುರಸಭೆ ಕಾರ್ಯಾಲಯದ ಪಕ್ಕದಲ್ಲಿ ಇರುವ ಸಂತೋಷ ತಂದೆ ಸುಭಾಷ ಗುತ್ತೆದಾರ ಇವರ ಜಾಗದಲ್ಲಿ ಆರಕ್ಷಕ ಉಪ ನಿರೀಕ್ಷಕರು ಪೊಲೀಸ್ ಠಾಣೆ ಆಳಂದ ಇವರು ತಮ್ಮ ಸಿಬ್ಬಂದಿಯೊಂದಿಗೆ ದಾಳಿ ಮಾಡಲಾಗಿ, ಅಕ್ರಮ ಮದ್ಯಸಾರ, ಸರಾಯಿ ಹೊಂದಿ ಸರಾಯಿ ತಯ್ಯಾರಿಸುತ್ತಿರುವುದು ಕಂಡುಬಂದ ಹಿನ್ನೆಲೆಯಲ್ಲಿ ಶ್ರೀ ಅನಿಲ ತಂದೆ ಸಂಬಾಜಿ ಉಕಂಡೆ ಸಂಗಡ 16 ಜನರ ವಿರುದ್ಧ ತಮ್ಮ ಗುನ್ನೆ ಸಂಖ್ಯೆ: 06:2003 ದಿನಾಂಕ: 09.01.2003 ಪ್ರಕರಣ ದಾಖಲಿಸಿ ಪಂಚರ ಸಮಕ್ಷಮ ಈ ಕೆಳಕಂಡ ಮುದ್ದೆ ಮಾಲು ವಶಪಡಿಸಿಕೊಂಡಿರುತ್ತಾರೆ.

1) ಒಂದು ಕಬ್ಬಿಣದ ನಕಲಿ ಸರಾಯಿ ಪಾಕೇಟ ತಯಾರಿಸುವ ಮೆಶಿನ್ ಅದಕ್ಕೆ ಕರೆಂಟ್ ಮೋಟಾರ್ ಸಮೇತ 2) 1300 (ಹದಿಮೂರು ಸಾವಿರ) ನಕಲಿ ಸರಾಯಿ ಪಾಕೇಟ್ 3) ಒಂದು ಸ್ಯಾಚೆಟ್ ಬಂಡಲ್ ಅದರ ಮೇಲೆ ಸೀಲ್ ಹಾಕಿ 100 ಎಂ.ಎಲ್ 35 ಯುಪಿ ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಿದ ಮೈಸೂರು ಸೇಲ್ಸ್ ಇಂಟರನ್ಯಾಷನಲ್ ಲಿಮಿಟೆಡ್ ಬೀದರ್ ಜಿಲ್ಲೆ ಅಂತ ಬರೆದಿದ್ದು, 4) ಮೂರು ಸ್ಯಾಚೆಟ್ ಬಂಡಲ್‌ಗಳು ಅವುಗಳ ಮೇಲೆ ಕರ್ನಾಟಕ ಸರಕಾರ 100 ಎಂ.ಎಲ್ 35 ಯುಪಿ ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಿದ ಮೈಸೂರು ಇಂಟರ್‌ನ್ಯಾಷನಲ್ ಲಿಮಿಟೆಡ್ ಗುಲಬರ್ಗಾ ಜಿಲ್ಲೆ ಲೈ.ಸಂ. ಇಸಿಇ.06:ಎಬಿಜಿ:2002-03 ದಿನಾಂಕ: 01.07.2002 5) ಒಂದು ಚೀಲದಲ್ಲಿ 219 ಸರಾಯಿ ಪಾಕೆಟ್‌ಗಳಂತೆ ಒಟ್ಟು 194 ಚೀಲಗಳು ಸರಾಯಿ ಪಾಕೆಟ್‌ಗಳು 6) ಒಂದು 1/2 ಹೆಚ್.ಪಿ. ಕರೆಂಟ್ ಮೋಟಾರ್ 7) ಒಂದು 407 ಟೆಂಪೊ ಅದರ ನಂ.ಕೆಎ-32 7117 8) ಒಂದು 5 ಕೆವಿಎ ಸರ್ವೋ ಸ್ಟೆಬಲೈಸರ್ ಮೋಟಾರ್ 9) ಒಂದು ಹಾಪ ಬಂಡಲ್ ಎಸ್.ಆರ್.ಜಿ. ಅಂತ ಇರುವ ಸ್ಟಿಕರ್ 10) 4 ಸ್ಪಿರೀಟ್ ತುಂಬಿದ 160 ಲೀಟರ್ ಉಳ್ಳ ಫೈಬರ್ ಬ್ಯಾರೆಲ್‌ಗಳು.

ವಶಪಡಿಸಿಕೊಂಡ ಮುದ್ದೆ ಮಾಲನ್ನು ಅಬಕಾರಿ ಉಪ ನಿರೀಕ್ಷಕರು ಆಳಂದ ಇವರಿಗೆ ವರ್ಗಾವಣೆ ಮಾಡಲು ಫಿರ್ಯಾದಿದಾರರು ಪ್ರಕರಣ ದಾಖಲಿಸಿ 3 1/2 ತಿಂಗಳ ನಂತರ ಸಲ್ಲಿಸಿ ದಿನಾಂಕ: 28.04.2003 ರಂದು ಅನುಮತಿ ಪಡೆದಿರುತ್ತಾರೆ.

ಫಿರ್ಯಾದಿದಾರರು ತಮ್ಮ ಪತ್ರ ಸಂಖ್ಯೆ:06:ಸಿಆರ್‌ಎಂ: ಎಪಿಎಸ್:2003 ದಿನಾಂಕ: 06.05.2003 ರಂದು ಅಬಕಾರಿ ಉಪ ನಿರೀಕ್ಷಕರು ಉಪ ವಲಯ ಆಳಂದ ಇವರಿಗೆ ನೀಡಿರುತ್ತಾರೆ.

ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಸ್ವತ್ತುಗಳು ಹಾಗೂ ವಾಹನದ ಮಾಲಿಕರಿಗೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಶ್ರೀ ಸಂತೋಷ ತಂದೆ ಸುಭಾಷ ಗುತ್ತೆದಾರ ಸಾ: ಮಟಕಿ ರೋಡ್ ಆಳಂದ ಇವರಿಗೆ ಕಾರಣ ಕೇಳುವ ನೋಟೀಸನ್ನು ದಿನಾಂಕ: 19.02.2004 ರಂದು ನೀಡಲಾಗಿತ್ತು ಸದರಿಯವರಿಗೆ ಈ ನೋಟೀಸು ದಿನಾಂಕ: 20.02.2004 ರಂದು ಅಬಕಾರಿ ನಿರೀಕ್ಷಕರು ವಲಯ ಆಳಂದ ಇವರು ಖುದ್ದಾಗಿ ಜಾರಿಗೊಳಿಸಿರುತ್ತಾರೆ. ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ಸಂಖ್ಯೆ: ಕೆಎ-32 7117 ಈಗಾಗಲೇ ಆರಕ್ಷಕ ಉಪ ನಿರೀಕ್ಷಕರು ಪೊಲೀಸ್ ಠಾಣೆ ಆಳಂದ ಇವರು ದಾಖಲಿಸಿದ ಪ್ರಕರಣ ಸಂಖ್ಯೆ: 99: 2000 ದಿನಾಂಕ: 20.03.2000 ರಲ್ಲಿ ವಶಪಡಿಸಿಕೊಳ್ಳಲಾಗಿದೆ. ಈ ಪ್ರಕರಣವನ್ನು ಇತ್ಯರ್ಥಪಡಿಸಿ ಈ ವಾಹನವನ್ನು ಬಿಡುಗಡೆಗೊಳಿಸಲಾಗಿದೆ. ಸದರಿ ವಾಹನವನ್ನು ವಾಹನದ ಮಾಲಿಕರು ಪುನಃ ಇಂತಹ ಕೃತ್ಯಕ್ಕೆ ಉಪಯೋಗಿಸಿರುವುದರಿಂದ ಎರಡನೇ ಬಾರಿ ವಶಪಡಿಸಿಕೊಳ್ಳಲಾಗಿದೆ. ಆದ್ದರಿಂದ ಈ ವಾಹನವನ್ನು ಅಕ್ರಮ ಚಟುವಟಿಕೆಗಳಲ್ಲಿ ತೊಡಗಿಸುತ್ತಿರುವುದು ನಿಖರವಾಗಿ ಕಂಡುಬಂದಿದೆ. ಪುನಃ ಪುನಃ ಇಂತಹ ಕೃತ್ಯಗಳಿಗೆ ವಾಹನವನ್ನು ಉಪಯೋಗಿಸುತ್ತಿರುವುದರಿಂದ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂದು ಈ ಪ್ರಾಧಿಕಾರವು ಭಾವಿಸಿದೆ. ಆದಾಗ್ಯೂ ಪ್ರಾಕೃತಿಕ ನ್ಯಾಯದ ದೃಷ್ಟಿಯಿಂದ ವಾಹನದ ಮತ್ತು ಸ್ವತ್ತಿನ ಮಾಲಿಕರಿಗೆ ಕಾಲಾವಕಾಶ ನೀಡಿದರೂ ಸಹ ಈ ಪ್ರಾಧಿಕಾರ ನೀಡಿದ ಕಾರಣ ಕೇಳುವ ನೋಟೀಸು ಜಾರಿಯಾದರೂ ಉತ್ತರ ಸಲ್ಲಿಸಿರುವುದಿಲ್ಲ. ಅಲ್ಲದೇ ವಿಚಾರಣೆಗಾಗಿ ದಿನಾಂಕ ಗೊತ್ತುಪಡಿಸಿ ನೋಟೀಸು ನೀಡಿದರೂ ಸಹ ಸದರಿಯವರು ವಿಚಾರಣೆಗೆ ಹಾಜರಾಗಿರುವುದಿಲ್ಲ. ಇದರಿಂದ ವಾಹನದ ಮತ್ತು ಸ್ವತ್ತಿನ

ಮಾಲಿಕರಿಗೆ ಪ್ರಕರಣದ ವಿಲೇವಾರಿಗೆ ಒಲವು ತೋರಿಲ್ಲವೆಂದು ಸ್ಪಷ್ಟವಾಗುತ್ತದೆ. ಫಿರ್ಯಾದಿದಾರರಿಗೂ ಕೂಡಾ ವಿಚಾರಣೆಗೆ ಹಾಜರಾಗಲು ನೋಟೀಸು ಜಾರಿ ಮಾಡಲಾಗಿದೆ.

ಕಲಂ 43ರ ಅಡಿಯಲ್ಲಿ ಪ್ರಕರಣವು ದಾಖಲು ಮಾಡಿ ಸ್ವತ್ತುಗಳು ಯಾರೊಬ್ಬರ ಸ್ವಾಧೀನದಲ್ಲಿ ಬರುವ ಬಗ್ಗೆ ಸಮಾಧಾನಕರವಾಗಿ ರುಜುವಾತನ್ನು ಹಾಜರು ಪಡಿಸದೇ ಇದ್ದಾಗ ಪ್ರಕರಣವನ್ನು ಪತ್ತೆ ಹಚ್ಚಿ ಒಂದು ತಿಂಗಳೊಳಗಾಗಿ ಯಾರೊಬ್ಬರು ಪ್ರಾಧಿಕಾರದ ಮುಂದೆ ಹಾಜರಾಗಿ ಸದರಿ ಸ್ವತ್ತುಗಳು ತಮ್ಮದೆಂದು ಹೇಳಿ, ಅದು ಕಾನೂನು ಬದ್ಧವಾಗಿದೆ ಎಂಬ ಬಗ್ಗೆ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಸದರಿ ಸ್ವತ್ತುಗಳು ಅಬಕಾರಿ ಕಾಯ್ದೆ 1965ರ ಕಲಂ 43ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಸ್ವತ್ತುಗಳು ಆಗಿದ್ದಲ್ಲಿ ಕಲಂ (ಸಿ) ಅಡಿಯಲ್ಲಿ ಪ್ರಾಧಿಕಾರವು ಅಕ್ರಮ ಮದ್ಯವನ್ನು ಹಾಗೂ ಸಾಗಾಟಕ್ಕೆ ಬಳಸಿದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ.

ಈ ಪ್ರಕರಣ ದಾಖಲಿಸಿ ಒಂದು ವರ್ಷ ಕಳೆದರೂ ಸಹ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಮತ್ತು ಸ್ವತ್ತುಗಳಿಗೆ ತನ್ನದೆಂದು ಯಾರೂ ಇಲ್ಲಿಯವರೆಗೆ ಹಕ್ಕು ಚಲಾಯಿಸಿರುವುದಿಲ್ಲ ಆದ್ದರಿಂದ ಈ ಪ್ರಕರಣದ ವಿಚಾರಣೆಯನ್ನು ಮುಂದುವರಿಸುವುದು ಸಮರ್ಪಕವಲ್ಲವೆಂದು ಭಾವಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

**ಸಂಖ್ಯೆ: ಅಬಕಾರಿ:ಅಪರಾಧ:1020:2002-03:7215 ದಿನಾಂಕ: 26ನೇ ಫೆಬ್ರವರಿ 2004**

ಅಸದ್ ಅಲಿ ಅನ್ಸಾರಿ, ಅಧಿಕಾರಿಯುತ ಅಧಿಕಾರಿ ಹಾಗೂ ಅಬಕಾರಿ ಅಧೀಕ್ಷಕರು ಗುಲಬರ್ಗಾ ಜಿಲ್ಲೆ ಗುಲಬರ್ಗಾ ಆದ ನಾನು ಅಬಕಾರಿ ಕಾಯ್ದೆ 1965ರ 43 (ಎ)ದಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಹಾಗೂ ಕಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮವನ್ನು ಅನುಸರಿಸಿ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಸ್ವತ್ತುಗಳು ಹಾಗೂ ವಾಹನವನ್ನು ಉದ್ದೇಶ ಪೂರ್ವಕವಾಗಿ ತೊಡಗಿಸಿರುವುದು ಈ ಪ್ರಾಧಿಕಾರಕ್ಕೆ ಮನವರಿಕೆ ಆಗಿರುವುದರಿಂದ ಈ ಕೆಳಕಂಡ ಸ್ವತ್ತುಗಳು ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಆದೇಶಿಸಿದ್ದೇನೆ.

1. ಒಂದು ಕಬ್ಬಿಣದ ನಕಲಿ ಸರಾಯಿ ಪಾಕೇಟ್ ತಯಾರಿಸುವ ಮೆಶಿನ್ ಅದಕ್ಕೆ ಕರೆಂಟ್ ಮೋಟಾರ್ ಸಮೇತ
2. 13000 (ಹದಿಮೂರು ಸಾವಿರ) ನಕಲಿ ಸರಾಯಿ ಪಾಕೇಟ್
3. ಒಂದು ಸ್ಯಾಚೇಟ್ ಬಂಡಲ್ ಅದರ ಮೇಲೆ ಸೀಲ್ ಹಾಕಿ 100 ಎಂ.ಎಲ್ 35 ಯುಪಿ ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಿದ ಮೈಸೂರು ಸೇಲ್ಸ್ ಇಂಟರ್‌ನ್ಯಾಷನಲ್ ಲಿಮಿಟೆಡ್ ಬೀದರ್ ಜಿಲ್ಲೆ ಅಂತ ಬರೆದಿದ್ದು.
4. ಮೂರು ಸ್ಯಾಚೇಟ್ ಬಂಡಲ್‌ಗಳು ಅವುಗಳ ಮೇಲೆ ಕರ್ನಾಟಕ ಸರಕಾರ 100 ಎಂ.ಎಲ್ 35 ಯುಪಿ ಅಬಕಾರಿ ಭದ್ರತಾ ಉಗ್ರಾಣದಲ್ಲಿ ತಯಾರಿಸಿದ ಮೈಸೂರು ಇಂಟರ್‌ನ್ಯಾಷನಲ್ ಲಿಮಿಟೆಡ್ ಗುಲಬರ್ಗಾ ಜಿಲ್ಲೆ ಲೈ.ಸಂ. ಇಸಿಇ: 06: ಎಬಿಜಿ: 2002-03 ದಿನಾಂಕ: 01.07.2002.
5. ಒಂದು ಚೀಲದಲ್ಲಿ 219 ಸರಾಯಿ ಪಾಕೇಟ್‌ಗಳಂತೆ ಒಟ್ಟು 194 ಚೀಲಗಳು ಸರಾಯಿ ಪಾಕೇಟ್‌ಗಳು
6. ಒಂದು 1/2 ಹೆಚ್.ಪಿ. ಕರೆಂಟ್ ಮೋಟಾರ್
7. ಒಂದು 407 ಟೆಂಪೊ ಅದರ ನಂ. ಕೆಎ-32 7117
8. ಒಂದು 5 ಕೆವಿಎ ಸರ್ವೊ ಸ್ಟೆಬಲೈಸರ್ ಮೋಟಾರ್
9. ಒಂದು ಹಾಪ ಬಂಡಲ್ ಎಸ್.ಆರ್.ಜಿ. ಅಂತ ಇರುವ ಸ್ಟೀಕರ್
10. 4 ಸ್ಪಿರೀಟ್ ತುಂಬಿದ 160 ಲೀಟರ್ ಉಳ್ಳ ಫೈಬರ್ ಬ್ಯಾರೆಲ್‌ಗಳು

ವಶಪಡಿಸಿಕೊಂಡ ಸರಾಯಿಯೂ ಮಾನವನ ಸೇವನೆಗೆ ಯೋಗ್ಯವಾಗದೇ ಇರುವುದರಿಂದ ಅದನ್ನು ಈಗಾಗಲೇ ನಾಶಪಡಿಸಲು ದಿನಾಂಕ: 27.10.2003 ರಂದು ನೀಡಿದ ಆದೇಶವನ್ನು ಕ್ರಮಬದ್ಧಗೊಳಿಸಲಾಗಿದೆ.

ಈ ಆದೇಶವನ್ನು ಇಂದು ಅಂದರೆ ದಿನಾಂಕ: 26.2.2004 ರಂದು ಬೆರಳಚ್ಚುಗಾರರಿಗೆ ಉಕ್ತಲೇಖನ ನೀಡಿ ಬೆರಳಚ್ಚು ಮಾಡಿದ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು. ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

**ಅಸದ್ ಅಲಿ ಅನ್ಸಾರಿ**

ಪಿ.ಆರ್. 423 ಅಧಿಕಾರಿಯುತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ಗುಲಬರ್ಗಾ ಜಿಲ್ಲೆ, ಗುಲಬರ್ಗಾ.

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ**

**ಸರ್ಕಾರಿ ಲೇಖನ ಸಾಮಗ್ರಿ ಮಳಿಗೆ, ಬೆಂಗಳೂರು-560 001**

**ಪ್ರಕಟಣೆ**

**ಸಂಖ್ಯೆ:ಸ.ಲೇ.ಸಾ.ಮ:728/03-04 ದಿನಾಂಕ: 4ನೇ ಮಾರ್ಚ್ 2004**

2003-04ನೇ ಸಾಲಿನ ವಾರ್ಷಿಕ ಸರಕು ಪರಿಶೀಲನೆಯ ಪ್ರಯುಕ್ತ ಸರ್ಕಾರಿ ಲೇಖನ ಸಾಮಗ್ರಿ ಮಳಿಗೆ, ಬೆಂಗಳೂರು-1 ಇಲ್ಲಿ ದಿನಾಂಕ: 1.4.2004 ರಿಂದ 21.4.2004 ರವರೆಗೆ (ಎರಡು ದಿನಗಳು ಸೇರಿ) ಎಲ್ಲಾ ಸರ್ಕಾರಿ ಕಛೇರಿಗಳಿಗೆ ಲೇಖನ ಸಾಮಗ್ರಿಗಳ ನೀಡಿಕೆಯನ್ನು ನಿಲ್ಲಿಸಲಾಗಿದೆ ಎಂಬುದಾಗಿ ಈ ಮೂಲಕ ತಿಳಿಯಪಡಿಸಲಾಗಿದೆ.

**ಹೆಚ್. ಗಂಗಯ್ಯ**
ನಿರ್ದೇಶಕರು.

**NOTIFICATION No. STY:728/03-04 Dated: 4th March 2004**

It is hereby notified for the information of all the Government Offices, that there will be no issue of Stationery articles by the Government Stationery Depot., Bangalore-1 from 1-4-2004 to 21-4-04 (Both days inclusive) on Account of Annual Stock Verification for the year 2003-04.

**H. GANGAIAH**
Director.

PR-391